KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಡಿಸೆಂಬರ್ ೧೭, ೨೦೦೯ (ಮಾರ್ಗಶಿರ ೨೬, ಶಕ ವರ್ಷ ೧೯೩೧) | ಸಂಚಿಕೆ ೫೦ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ರಾಯಚೂರು ಜಿಲ್ಲೆ, ರಾಯಚೂರು ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆ (ಪರಿಷ್ಕೃತ–1) ನ್ನು ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ನಅಇ:61:ಟಿಟಿಪಿ:98 ದಿನಾಂಕ: 14–01–1999.

2) ಆಯುಕ್ತರು, ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರ ಇವರ ಪತ್ರ ಸಂಖ್ಯೆ: ನಪಾರಾ:ಮ.ಯೋ:ಪ–1: 09–10/278–79, ದಿನಾಂಕ: 15–07–2009.

3) ನಿರ್ದೇಶಕರು, ನಗರ ಯೋಜನಾ ಇಲಾಖೆ ಇವರ ಏಕ ಕಡತ ಸಂಖ್ಯೆ: ನಯೋ:ಉನಿ:(ಯೋವಿ): ರಾಯಚೂರು:ಮಾ.ಪ್ಲಾ:18: 2009 ದಿನಾಂಕ: 13–08–2009ರಲ್ಲಿ ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ರಾಯಚೂರು ಜಿಲ್ಲೆ, ರಾಯಚೂರು ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನಾ ಪ್ರದೇಶಕ್ಕೆ ತಯಾರಿಸಲಾದ ಮಹಾ ಯೋಜನೆಯನ್ನು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 13(1)ರನ್ವಯ ಸರ್ಕಾರವು ಅನುಮೋದನೆ ನೀಡಿ ಆದೇಶಿಸಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ರಾಯಚೂರು ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಯನ್ನು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(ಡಿ) ರನ್ವಯ ಪರಿಷ್ಕರಿಸಿ, ಮಹಾ ಯೋಜನೆಗೆ (ಪರಿಷ್ಕೃತ–1)ನ್ನು ರೂಪಿಸಿ ಸರ್ಕಾರದ ತಾತ್ಕಾಲಿಕ ಅನುಮೋದನೆಗಾಗಿ ಸಲ್ಲಿಸಿದೆ.

ಮೇಲೆ ಓದಲಾದ (3)ರ ಏಕ ಕಡತದಲ್ಲಿ ನಗರ ಯೋಜನಾ ನಿರ್ದೇಶಕರು, ರಾಯಚೂರು ನಗರ ಯೋಜನಾ ಪ್ರದೇಶದ ಜನಸಂಖ್ಯೆಯು 2001ರ ಜನಗಣತಿಯಂತೆ 2,07,421 ಇದ್ದು, 2021ನೇ ಇಸವಿಗೆ 5,00,000 ಜನಸಂಖ್ಯೆ ಆಗಬಹುದೆಂದು ಅಂದಾಜಿಸಿ, ಮಹಾಯೋಜನೆ (ಪರಿಷ್ಕೃತ–1) (ತಾತ್ಕಾಲಿಕ)ಯನ್ನು ರೂಪಿಸಲಾಗಿದೆ. ರಾಯಚೂರು ಸ್ಥಳೀಯ ಯೋಜನಾ ಪ್ರದೇಶದ ವಿಸ್ತೀರ್ಣವು ಒಟ್ಟು 21,583 ಹೆಕ್ಟೇರ್ (215.83 ಚ.ಕಿ.ಮೀ.) ಗಳಷ್ಟು ಇರುತ್ತದೆ. ಪ್ರತಿ ಹೆಕ್ಟೇರ್‌ಗೆ 80 ಜನರಂತೆ ಪರಿಗಣಿಸಿ, 2021ನೇ ಇಸವಿಗೆ 5,00,000 ಜನರಿಗೆ ಬೇಕಾಗಬಹುದಾದ ನಗರೀಕರಣದ ಪ್ರದೇಶ (ಕನರ್‌ಬೇಷನ್ ಏರಿಯಾ) ಕ್ಕಾಗಿ ಒಟ್ಟು 6295.00 ಹೆಕ್ಟೇರ್ ಪ್ರದೇಶವನ್ನು ಪ್ರಸ್ತಾಪಿಸಿ ಮಹಾ ಯೋಜನೆಯನ್ನು ರೂಪಿಸಲಾಗಿದೆ. ರಾಯಚೂರು ಪಟ್ಟಣದ ಜನಸಂಖ್ಯೆಯ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ, ಹಾಲಿ ಬೆಳವಣಿಗೆಯ ಗತಿ ರಸ್ತೆಗಳ ಹಾಲಿ ಪರಿಚಲನೆ ವ್ಯವಸ್ಥೆಯ ಸಮಸ್ಯೆಗಳನ್ನು ವಿಶ್ಲೇಷಿಸಿ ಯೋಜನಾ ತತ್ವಗಳಿಗನುಗುಣವಾಗಿ ಹಾಗೂ ಮಹಾಯೋಜನೆ ತಯಾರಿಕೆ ಬಗ್ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 9 ರಿಂದ 12ರವರೆಗೆ ನಿಗಧಿಪಡಿಸಿರುವ

ಅಂಶಗಳನ್ನು ಪರಿಗಣಿಸಿ ನಗರದ ಮುಂದಿನ ಬೆಳವಣಿಗೆಗೆ ವಿವಿಧ ಉಪಯೋಗಗಳಿಗೆ ಬೇಕಾಗಬಹುದಾದ ಭೂಮಿಯನ್ನು ಈ ಕೆಳಕಂಡಂತೆ ಕಾಯ್ದಿರಿಸಿ ಮಹಾ ಯೋಜನೆ ತಯಾರಿಸಿದೆ. ಸದರಿ ಯೋಜನೆಯಲ್ಲಿ ವಸತಿಗಾಗಿ ಶೇ. 46.54, ವಾಣಿಜ್ಯಕ್ಕಾಗಿ ಶೇ.3.62, ಕೈಗಾರಿಕೆಗಾಗಿ ಶೇ.13.23, ಸಾರ್ವಜನಿಕ ಅರೆ ಸಾರ್ವಜನಿಕಕ್ಕಾಗಿ ಶೇ.5.22 ಉದ್ಯಾನವನ ಮತ್ತು ಬಯಲು ಜಾಗಕ್ಕಾಗಿ ಶೇ.7.30, ಸಾರ್ವಜನಿಕ ಸೌಲಭ್ಯಕ್ಕಾಗಿ ಶೇ.1.02 ಹಾಗೂ ಸಾರಿಗೆ ಮತ್ತು ಸಂಪರ್ಕಕ್ಕಾಗಿ ಶೇ.23.02 ವಿಸ್ತೀರ್ಣವನ್ನು ನಿಗದಿಪಡಿಸಲಾಗಿದೆ. ಮತ್ತು ಯೋಜನೆಯನ್ನು ಅನುಷ್ಠಾನಗೊಳಿಸಲು ವಲಯ ನಿಯಮಾವಳಿಗಳನ್ನು ರೂಪಿಸಲಾಗಿದೆ. ಸದರಿ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(2) ರನ್ವಯ ಸದರಿ ಯೋಜನೆಯನ್ನು ತಾತ್ಕಾಲಿಕ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಈ ವಿಷಯವನ್ನು ಪರಿಶೀಲಿಸಿದ ನಂತರ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ 132 ಗುಅಪ್ರಾ 2009, ಬೆಂಗಳೂರು, ದಿನಾಂಕ: 25ನೇ ಸೆಪ್ಟೆಂಬರ್ 2009**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ರಾಯಚೂರು ಜಿಲ್ಲೆ ರಾಯಚೂರು ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾ ಯೋಜನೆಗೆ (ಪರಿಷ್ಕೃತ–1) ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ (ತಿದ್ದುಪಡಿ) ಕಾಯ್ದೆ 2004ರ ಪ್ರಕರಣ 13ಡಿ ಮತ್ತು 13(1) ರನ್ವಯ ಸರ್ಕಾರದ ತಾತ್ಕಾಲಿಕ ಅನುಮೋದನೆಯನ್ನು ನೀಡಲಾಗಿದೆ.

ಮಹಾ ಯೋಜನೆ (ಪರಿಷ್ಕೃತ–1)ಗೆ ತಾತ್ಕಾಲಿಕ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2253 **ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ವಿಷಯ:** ಚಿಕ್ಕಬಳ್ಳಾಪುರ ಜಿಲ್ಲೆ, ಗೌರಿಬಿದನೂರು ಸ್ಥಳೀಯ ಯೋಜನಾ ಪ್ರದೇಶವನ್ನು ಘೋಷಿಸುವ ಬಗ್ಗೆ

**ಓದಲಾಗಿದೆ:** ಕಡತ ಸಂಖ್ಯೆ; ನಅಇ 680 ಅಪ್ರಾ 2008, ದಿನಾಂಕ: 6–7–2009ರಲ್ಲಿ ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರು, ಬೆಂಗಳೂರು ಇವರು ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ:**

ಗೌರಿಬಿದನೂರು ಪಟ್ಟಣವು ಚಿಕ್ಕಬಳ್ಳಾಪುರ ಜಿಲ್ಲೆಯ ಒಂದು ಪ್ರಮುಖ ತಾಲ್ಲೂಕು ಕೇಂದ್ರವಾಗಿದ್ದು, ಇಲ್ಲಿ ವಾಣಿಜ್ಯ ಚಟುವಟಿಕೆ ಹಾಗೂ ರೇಷ್ಮೆ ಉದ್ಯಮವು ಪ್ರಮುಖವಾಗಿದ್ದು, ಸದರಿ ಪಟ್ಟಣವು ಇತ್ತೀಚೆಗೆ ಶೈಕ್ಷಣಿಕ ಕ್ಷೇತ್ರದಲ್ಲಿ ಸಹ ಅಭಿವೃದ್ಧಿ ಹೊಂದುತ್ತಿರುವುದರಿಂದ ಪಟ್ಟಣದ ಯೋಜಿತ ಬೆಳವಣಿಗಾಗಿ ಸ್ಥಳೀಯ ಯೋಜನಾ ಪ್ರದೇಶ ಘೋಷಿಸುವುದು ಅವಶ್ಯಕವಾಗಿರುತ್ತದೆ.

ಮೇಲೆ ಓದಲಾದ ಕಡತದಲ್ಲಿ ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರು, ಬೆಂಗಳೂರು ಇವರು ಗೌರಿಬಿದನೂರು ಪಟ್ಟಣದ ಪುರಸಭೆಯ ವ್ಯಾಪ್ತಿಯಲ್ಲಿ 2001ರ ಜನಗಣತಿಯಂತೆ ಜನಸಂಖ್ಯೆಯು 30,537 ಆಗಿದ್ದು, ಪುರಸಭೆ ವ್ಯಾಪ್ತಿಯ ವಿಸ್ತೀರ್ಣವು 9.60 ಚ.ಕಿ.ಮೀ. ಇರುತ್ತದೆ. ಪ್ರಸ್ತುತ, ಹಾಲಿ ಇರುವ ಪುರಸಭೆಯ ಎಲ್ಲೆಯನ್ನೇ ಸ್ಥಳೀಯ ಯೋಜನಾ ಪ್ರದೇಶ ಎಂದು ನಿಗದಿಪಡಿಸಲಾಗಿದ್ದು, ಪ್ರಸ್ತಾಪಿತ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಗೆ ಒಳಪಡುವ ಗ್ರಾಮಗಳನ್ನು ಸೇರಿಸಿ, ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 4–ಎ ರನ್ವಯ ಸ್ಥಳೀಯ ಯೋಜನಾ ಪ್ರದೇಶವೆಂದು ಘೋಷಿಸಲು ಅಭಿಪ್ರಾಯವನ್ನು ನೀಡಿರುತ್ತಾರೆ.

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರೀಶೀಲಿಸಿ, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ 680 ಅಪ್ರಾ 2008, ಬೆಂಗಳೂರು, ದಿನಾಂಕ: 11ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಗೌರಿಬಿದನೂರು ಸ್ಥಳೀಯ ಯೋಜನಾ ಪ್ರದೇಶ ವ್ಯಾಪ್ತಿಗೆ ಒಳಪಡುವ ಗ್ರಾಮಗಳ ವಿವರಗಳನ್ನು ಅನುಬಂಧ–1 ರಲ್ಲಿ ತೋರಿಸಿರುವಂತೆ ಹಾಗೂ ಅನುಬಂಧ–2 ರಲ್ಲಿನ ಎಲ್ಲೆಯ ವಿವರಣೆಯಂತೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 4–ಎ ರನ್ವಯ ಗೌರಿಬಿದನೂರು ಸ್ಥಳೀಯ ಯೋಜನಾ ಪ್ರದೇಶ ಎಂದು ಘೋಷಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ಅನುಬಂಧ–1**

**ಗೌರಿಬಿದನೂರು ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಗೆ ಒಳಪಡುವ ಗ್ರಾಮಗಳ ವಿವರ**

| ಕ್ರ. ಸಂ. | ಗ್ರಾಮದ ಹೆಸರು | ವಿಸ್ತೀರ್ಣ | ಜನಸಂಖ್ಯೆ 2001 ರಂತೆ |
|---|---|---|---|
| 1. | ಗೌರಿಬಿದನೂರು ಪಟ್ಟಣ | | |
| 2. | ಹಿರೇಬಿದನೂರು (ಭಾಗಶ:) | | |
| 3. | ಗುಂಡಾಪುರ (ಭಾಗಶ:) | | |
| 4. | ಮಾದನಹಳ್ಳಿ (ಭಾಗಶ:) | | |
| 5. | ಕರಿಕಲ್ಲಹಳ್ಳಿ (ಭಾಗಶ:) | | |
| 6. | ದೇವರಹೊಸಹಳ್ಳಿ (ಭಾಗಶ:) | | |
| 7. | ಕಲ್ಲೂಡಿ (ಭಾಗಶ:) | | |
| | **ಒಟ್ಟು** | **9.60 ಚ.ಕಿ.ಮೀ.** | **30,537** |

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ಅನುಬಂಧ–2**

**ಗೌರಿಬಿದನೂರು ಸ್ಥಳೀಯ ಯೋಜನಾ ಪ್ರದೇಶದ ಎಲ್ಲೆಯ ವಿವರ**

ಕಲ್ಲೂಡಿ ಸ.ನಂ. 38ರಿಂದ ಪ್ರಾರಂಭವಾಗಿ ಪಶ್ಚಿಮಾಭಿಮುಖವಾಗಿ ಕಲ್ಲೂಡಿ ಸ.ನಂ. 150ರ ಮುಖಾಂತರ ಬೆಂಗಳೂರು–ಹಿಂದೂಪುರ ರಸ್ತೆ ಹಾಗೂ ರಸ್ತೆ ಹಾಗೂ ರೈಲ್ವೆ ಜಾಡನ್ನು ಭೇದಿಸಿಕೊಂಡು ಸ.ನಂ. 171ರ ಮುಖಾಂತರ ಹಾದು ಪುನ: ಉತ್ತರ ಪಿನಾಕಿನಿ ನದಿಯನ್ನು ಭೇದಿಸಿಕೊಂಡು ದೇವರ ಹೊಸಹಳ್ಳಿ ಸ.ನಂ. 49,48,44,46ರ ಮುಖಾಂತರ ಹಾಯ್ದು ಸ.ನಂ. 42ನ್ನು ಸಂಧಿಸಿ ನಂತರ ದಕ್ಷಿಣಾಭಿಮುಖವಾಗಿ ಸ.ನಂ. 43,18,17,20,21,22ರ ಮುಖಾಂತರ ಹಾಯ್ದು ಕರೇ ಕಲ್ಲಹಳ್ಳಿ ಸ.ನಂ. 200,199,67,171,144 ಮತ್ತು 48ರ ತನಕ ಒಂದು ಸ.ನಂ. 149ನ್ನು ಸೇರುತ್ತದೆ. ಪುನ: ಪಶ್ಚಿಮಾಭಿಮುಖವಾಗಿ ಹೋಗಿ ಗುಂಡಾಪುರ ಸ.ನಂ. 124,196,127,126ರ ಮುಖಾಂತರ 124ನ್ನು ಸೇರುತ್ತದೆ ಪುನ: ಉತ್ತರಾಭಿಮುಖವಾಗಿ ಹೋಗಿ 116,117,107,119ರ ಮೂಲಕ ಹಾಯ್ದು ಸ.ನಂ. 132ನ್ನು ಸಂಧಿಸುತ್ತದೆ ಮತ್ತೆ ಪೂರ್ವದ ಕಡೆಗೆ ತಿರುಗಿ ಗುಂಡಾಪುರ ಸ.ನಂ. 2ರ ಮೂಲಕ ಸ.ನಂ. 3ರನ್ನು ಸಂಧಿಸುತ್ತದೆ. ಪುನ: ದಕ್ಷಿಣದ ಕಡೆಗೆ ತಿರುಗಿ ಸ.ನಂ. 3 ಹಾಗೂ 9ನ್ನು ಸಂಧಿಸುತ್ತದೆ. ಪುನಃ ಪೂರ್ವಕ್ಕೆ ತಿರುಗಿ ಮಾದನಹಳ್ಳಿ ಗ್ರಾಮದ ಸ.ನಂ. 179ನ್ನು ಸಂಧಿಸುತ್ತದೆ. ಮತ್ತೆ ದಕ್ಷಿಣದ ಕಡೆ ತಿರುಗಿ ಮಾದನಹಳ್ಳಿ ಗ್ರಾಮದ ಸ.ನಂ. 164ನ್ನು ಸಂಧಿಸುತ್ತದೆ. ಮತ್ತೆ ಪೂರ್ವದ ಕಡೆ ತಿರುಗಿ ಮಾದನಹಳ್ಳಿ ಗ್ರಾಮದ ಸ.ನಂ. 165,166,172,140ರ ಮುಖಾಂತರ ಸ.ನಂ. 139ನ್ನು ಸೇರುತ್ತದೆ. ಪುನಃ ದಕ್ಷಿಣದ ಕಡೆ ತಿರುಗಿ ಬೆಂಗಳೂರು ಕಡೆಗೆ ಹೋಗುವ ರೈಲ್ವೆ ರಸ್ತೆಯ ಸಮಾನಾಂತರವಾಗಿ ಹರಿದು ಮಾದನಹಳ್ಳಿ ಗ್ರಾಮದ ಸ.ನಂ. 120 ರಿಂದ ಪ್ರಾರಂಭವಾಗಿ ಬೆಂಗಳೂರು ಹಿಂದೂಪುರ ರಸ್ತೆಯನ್ನು ಭೇದಿಸಿಕೊಂಡು ಮಾದನಹಳ್ಳಿ ಗ್ರಾಮ ಸ.ನಂ. 305,107,111ರ ಮುಖಾಂತರ 109 ಸ.ನಂ.ನಲ್ಲಿ ಪೂರ್ವದ ಗಡಿಯನ್ನು ತಲುಪಿ ಗೌರಿಬಿದನೂರು ಪುರಸಭೆಯ ಮಾದನಹಳ್ಳಿ ಸ.ನಂ. 113ರಿಂದ ಉತ್ತಾರಾಭಿಮುಖವಾಗಿ ಹರಿದು 78,66,43,42,20,14 ಸ.ನಂಗಳ ಮುಖಾಂತರ ಪುನ: ಪೂರ್ವಕ್ಕೆ ತಿರುಗಿ ಉತ್ತರ ಪಿನಾಕಿನಿ ನದಿಯನ್ನು ಭೇಧಿಸಿಕೊಂಡು ಹಿರೀಬಿದನೂರು ಸ.ನಂ. 123,127,158ರ ಮುಖಾಂತರ ಸ.ನಂ. 73ಕ್ಕೆ ಸೇರಿ ಪುನ: ಉತ್ತರಾಭಿಮುಖವಾಗಿ ಹರಿದು ಸ.ನಂ. 201,192,227ನ್ನು ಸಂಧಿಸಿ ಪುನ: ಪಶ್ಚಿಮದ ಕಡೆಯಲ್ಲಿ ಉತ್ತರ ಪಿನಾಕಿನಿ ನದಿಯನ್ನು ಭೇಧಿಸಿಕೊಂಡು ಪುನಃ ಉತ್ತರಾಭಿಮುಖವಾಗಿ ನದಿಯ ದಡದಲ್ಲಿಯೇ ಹಾಯ್ದು ಕಲ್ಲೂಡಿ ಸ.ನಂ. 34,35,36,37ರ ಮುಖಾಂತರ ಹರಿದು ಸ.ನಂ. 38ರ ಪ್ರಾರಂಭದ ಬಿಂದುವಿನಲ್ಲಿ ಅಂತ್ಯಗೊಳ್ಳುತ್ತದೆ.

ಸಂಖ್ಯೆ: ನಅಇ 630 ಅಪ್ರಾ 2008

**ಸಿ.ಟಿ. ನಾರಾಯಣಸ್ವಾಮಿ**

ಪಿ.ಆರ್. 2254 ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ವಿಷಯ:** ಚಿಕ್ಕಮಗಳೂರು ನಗರಕ್ಕೆ ನೀರು ಸರಬರಾಜು ಮಾಡುವ 300 ಎಂ.ಎಂ. ಸಿ.ಐ. ಕೊಳವೆ ಮಾರ್ಗವನ್ನು ಹಿರೇಕೊಳಲೆ ಕೆರೆಯಿಂದ 4.54 ಎಂ.ಎಲ್.ಡಿ ನೀರು ಶುದ್ಧೀಕರಣ ಘಟಕದವರೆಗೆ 355.06 ಎಂ.ಎಂ. ಮೃದು ಕಬ್ಬಿಣದ ಕೊಳವೆ ಮಾರ್ಗಕ್ಕೆ ಬದಲಾವಣೆ ಮಾಡುವ ಯೋಜನೆಯ ಅಂದಾಜು ವೆಚ್ಚ ರೂ. 550.00 ಲಕ್ಷಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1) ವ್ಯ.ನಿ. ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರು ರವರ ಪತ್ರ ಸಂಖ್ಯೆ: ಕಜಮಂ /ತಾಂತ್ರಿಕ/ ಚಿಕ್ಕಮಗಳೂರು ನಿಸಯೋ–01/686/2009–10 ದಿ:24–6–2009.

**ಪ್ರಸ್ತಾವನೆ:**

ಚಿಕ್ಕಮಗಳೂರು ನಗರವು ಜಿಲ್ಲಾ ಕೇಂದ್ರವಾಗಿದ್ದು, 2001ರ ಜನಗಣತಿಯಂತೆ 1,01,251 ಜನಸಂಖ್ಯೆ ಇದ್ದು, ಪ್ರಸ್ತುತ 1,20,000 ಇರುತ್ತದೆ. ಈ ನಗರಕ್ಕೆ ಸುಮಾರು 8 ಕಿ.ಮೀ. ದೂರವಿರುವ ಹಿರೇಕೊಳಲೆ ಕೆರೆಯಿಂದ ಗುರುತ್ವಾಕರ್ಷಣೆ ಕೊಳವೆ ಮಾರ್ಗದ ಮೂಲಕ ಸುಮಾರು 6.5 ಗ್ಯಾಲನ್ ನೀರು ಸರಬರಾಜು ಮಾಡುತ್ತಿದ್ದು, ನೀರಿನ ವ್ಯವಸ್ಥೆಯನ್ನು ಸುಧಾರಿಸಲು ಯಗಚಿ ಜಲಾಶಯದಿಂದ ಒಟ್ಟು 22.70 ಎಂ.ಎಲ್.ಡಿ ನೀರು ಸರಬರಾಜು ಮಾಡುವ ಯೋಜನೆಯನ್ನು 2002ರಲ್ಲಿ ಚಾಲನೆಗೊಳಿಸಲಾಗಿದೆ. ಹಿರೇಕೊಳಲೆ ಕೆರೆಯಿಂದ ರತ್ನಗಿರಿ ಬೋರೆಯಲ್ಲಿರುವ ಜಲಶುದ್ಧೀಕರಣ ಘಟಕದವರೆಗೆ ಅಳವಡಿಸಿರುವ 300 ಮೀ.ಮೀ. ವ್ಯಾಸದ ಸಿ.ಐ. ಕೊಳವೆ ಮಾರ್ಗವು 1964ನೇ ವರ್ಷದಲ್ಲಿ ಅಳವಡಿಸಿದ್ದು ತುಂಬ ಹಳೆಯದಾಗಿರುತ್ತದೆ. ಸದರಿ ಕೊಳವೆ ಮಾರ್ಗದಲ್ಲಿ ಹೂಳು ತುಂಬಿದ್ದು, ಬಹಳಷ್ಟು ಕಡೆ ಹೊಡೆದು ಹೋಗಿ ಸಮರ್ಪಕವಾಗಿ ನೀರು ಪೂರೈಕೆಯಾಗುತ್ತಿಲ್ಲ. ಆದ್ದರಿಂದ ಈ ಕೊಳವೆ ಮಾರ್ಗವನ್ನು ಬದಲಾಯಿಸುವ ಅಗತ್ಯವಿರುತ್ತದೆ.

ಪಟ್ಟಣದ ನೀರು ಸರಬರಾಜು ವ್ಯವಸ್ಥೆಯನ್ನು ಉತ್ತಮಗೊಳಿಸಲು ಹಿರೇಕೊಳಲೆ ಕೆರೆಯಿಂದ ರತ್ನಗಿರಿ ಬೋರೆಯಲ್ಲಿರುವ ಜಲಶುದ್ಧೀಕರಣ ಘಟಕದವರೆಗೆ ಅಳವಡಿಸಿರುವ 300 ಮೀ.ಮೀ. ವ್ಯಾಸದ ಸಿ.ಐ. ಕೊಳವೆ ಮಾರ್ಗವನ್ನು 355.06 ಎಂ.ಎಂ. ಮೃದು ಕಬ್ಬಿಣದ ಕೊಳವೆ ಮಾರ್ಗಕ್ಕೆ ಬದಲಾವಣೆ ಮಾಡುವ ಯೋಜನೆಯನ್ನು **ನಗರ ನೀರು ಸರಬರಾಜು ಯೋಜನೆಯಡಿ** ಅಂದಾಜನ್ನು 2008–09ನೇ ಸಾಲಿನ (2009–10ನೇ ಸಾಲಿಗೆ ಮುಂದುವರೆದ) ಮಂಡಳಿ ಹಾಗೂ ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ದರ ಸೂಚಿಯನ್ವಯ ರೂ.550.00 ಲಕ್ಷಗಳಿಗೆ ತಯಾರಿಸಿ ಯೋಜನೆಯನ್ನು ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಕೈಗೆತ್ತಿಕೊಳ್ಳಲು ಹಾಗೂ ಯೋಜನೆಗೆ ಆಡಳಿತಾತ್ಮಕ ಅನುಮೋದನೆ ಕೋರಿ ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿ, ಇವರು ಮೇಲೆ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

| | |
|---|---|
| ಆರ್ಥಿಕ ಸಂಸ್ಥೆಗಳಿಂದ ಸಾಲ | ರೂ.275.00 ಲಕ್ಷಗಳು |
| ಸರ್ಕಾರದ ಅನುದಾನ | ರೂ.275.00 ಲಕ್ಷಗಳು |
| **ಒಟ್ಟು** | **ರೂ.550.00 ಲಕ್ಷಗಳು** |

ಈ ಯೋಜನೆಗೆ ಮಂಡಳಿಯ **2009–10**ನೇ ಸಾಲಿನ ಕ್ರಿಯಾ ಯೋಜನೆಯಲ್ಲಿ **1/3**ನೇ ರಷ್ಟು ಮೊತ್ತವನ್ನು ಅನುವು ಮಾಡಲು ಕ್ರಮ ಕೈಗೊಳ್ಳಲಾಗಿದೆ.

ಪ್ರಸ್ತಾವನೆಯಲ್ಲಿ ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ 16 ಯುಡಬ್ಲ್ಯೂಎಸ್ 2009 ಬೆಂಗಳೂರು, ದಿನಾಂಕ: 22ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಚಿಕ್ಕಮಗಳೂರು ನಗರಕ್ಕೆ ನೀರು ಸರಬರಾಜು ಮಾಡುವ 300 ಎಂ.ಎಂ. ಸಿ.ಐ. ಕೊಳವೆ ಮಾರ್ಗವನ್ನು ಹಿರೇಕೊಳಲೆ ಕೆರೆಯಿಂದ 4.54 ಎಂ.ಎಲ್.ಡಿ. ನೀರು ಶುದ್ಧೀಕರಣ ಘಟಕದವರೆಗೆ 355.06 ಎಂ.ಎಂ.ಮೃದು ಕಬ್ಬಿಣದ ಕೊಳವೆ ಮಾರ್ಗಕ್ಕೆ ಬದಲಾವಣೆ ಮಾಡುವ ಯೋಜನೆಯ ಅಂದಾಜು ವೆಚ್ಚ ರೂ.550.0 ಲಕ್ಷಗಳಲ್ಲಿ (ರೂ. ಐದುನೂರ ಐವತ್ತು ಲಕ್ಷಗಳು ಮಾತ್ರ) ನಗರ ನೀರು ಸರಬರಾಜು ಯೋಜನೆಯಡಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗೊಳಪಟ್ಟು ಆಡಳಿತಾತ್ಮಕ ಮಂಜೂರಾತಿಯನ್ನು ನೀಡಿದೆ.

1) Water rates as proposed by KUWS&DB have to be implemented to meet O & M cost.
2) KTPP provisions, quality control and timely completion should ensured.
3) ಸದರಿ ಯೋಜನೆಯನ್ನು ನಿಗದಿತ ವೇಳೆಯಲ್ಲಿ ಪೂರ್ಣಗೊಳಿಸುವುದು.
4) ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡಕೂಡದು.

ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಎಫ್.ಡಿ 443 ವೆಚ್ಚ–9/2009 ದಿ:23–7–2009ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2255 **ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ವಿಷಯ:** ತುಮಕೂರು ಉಪ್ಪಾರಹಳ್ಳಿ ರೈಲ್ವೆ ಮೇಲೆ ಸೇತುವೆ ನಿರ್ಮಾಣಕ್ಕೆ ಸಂಬಂಧಿಸಿದಂತೆ ಆಸ್ತಿಗಳನ್ನು ಕಳೆದುಕೊಂಡ ಭೂ ಮಾಲೀಕರುಗಳಿಗೆ ಪರ್ಯಾಯ ನಿವೇಶನಗಳನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ತುಮಕೂರು ನಗರಾಭಿವೃದ್ಧಿ ಪ್ರಾಧಿಕಾರ ಇವರ ಪತ್ರ ಸಂಖ್ಯೆ.TUDA/LAQ/CR/3/2006-07, ದಿನಾಂಕ: 15–3–07 ಮತ್ತು 1–7–08.

**ಪ್ರಸ್ತಾವನೆ:**

ಆಯುಕ್ತರು, ತುಮಕೂರು ನಗರಾಭಿವೃದ್ಧಿ ಪ್ರಾಧಿಕಾರ ರವರು ಮೇಲೆ ಓದಲಾದ ಪತ್ರಗಳಲ್ಲಿ ಸಲ್ಲಿಸಿರುವ ಪ್ರಸ್ತಾವನೆಯಲ್ಲಿ ತುಮಕೂರು ನಗರದ ಉಪ್ಪಾರಹಳ್ಳಿ ರೈಲ್ವೆ ಮೇಲು ಸೇತುವೆ ನಿರ್ಮಾಣಕ್ಕೆ ತಮ್ಮ ಖಾಸಗಿ ಆಸ್ತಿಗಳನ್ನು ಭೂ ಮಾಲೀಕರುಗಳು ಸ್ವಇಚ್ಛೆಯಿಂದ ನಗರಸಭೆಗೆ ಬಿಟ್ಟುಕೊಡಲು ಒಪ್ಪಿರುವುದರಿಂದ ಸದರಿ ಆಸ್ತಿ ಕಳೆದುಕೊಂಡವರಿಗೆ ನಿವೇಶನದ ಮೌಲ್ಯವನ್ನು ಕಟ್ಟಡ ಮತ್ತು ನಿವೇಶನದ ಪರಿಹಾರ ಮೊಬಲಗಿನಲ್ಲಿ ಮುರಿತಗೊಳಿಸಿ ಪ್ರಾಧಿಕಾರಕ್ಕೆ ಸಂದಾಯ ಮಾಡಿಕೊಳ್ಳುವ ಷರತ್ತಿಗೊಳಪಟ್ಟು ಭೂ ಮಾಲೀಕರುಗಳಾದ ಶ್ರೀ ಟಿ.ವಿ. ರಾಜೇಂದ್ರಕುಮಾರ್, ಶ್ರೀಮತಿ ಟಿ.ಎ. ಪರಹಾನ, ಶ್ರೀ ಟಿ.ಎ. ವಿಜಯೇಂದ್ರಕುಮಾರ್, ಶ್ರೀಮತಿ ರಾಜಮ್ಮ ಕೋಂ ಶ್ರೀ ಕೆ.ಸಿ. ಶಿವನಂಜಯ್ಯ, ಶ್ರೀ ಸಿ.ಬಿ. ನರಸಿಂಹಯ್ಯ, ಬಸಮ್ಮ ಕೋಂ ಸಿದ್ದಲಿಂಗಪ್ಪ, ಶ್ರೀಮತಿ ಕಸ್ತೂರಿಬಾಯಿ ಕೋಂ ಕೃಷ್ಣೋಜಿರಾವ್ ಹಾಗೂ ಶ್ರೀಮತಿ ನಾಗಲಾಂಬಿಕೆ ಇವರುಗಳಿಗೆ ತುಮಕೂರು ನಗರಾಭಿವೃದ್ಧಿ ಪ್ರಾಧಿಕಾರ ನಿರ್ಮಿಸಿರುವ ಮೆಳೇಕೋಟೆ–ವೀರಸಾಗರ ವಸತಿ ಬಡಾವಣೆಯಲ್ಲಿ ತಲಾ 40x60 ಅಡಿ ವಿಸ್ತೀರ್ಣದ 8 ನಿವೇಶನಗಳನ್ನು ಮಂಜೂರು ಮಾಡಲು ಪ್ರಾಧಿಕಾರವು ದಿನಾಂಕ: 24–2–2007 ರಂದು ಜರುಗಿದ ಸಭೆಯಲ್ಲಿ ತೀರ್ಮಾನ ಕೈಗೊಂಡಿರುವ ಹಿನ್ನೆಲೆಯಲ್ಲಿ ರೈಲ್ವೆ ಮೇಲು ಸೇತುವೆ ನಿರ್ಮಾಣಕ್ಕಾಗಿ ನಿವೇಶನ/ಮನೆ ಕಳೆದುಕೊಂಡವರಿಗೆ ಸದರಿ 8 ನಿವೇಶನಗಳನ್ನು ಪ್ರತಿ ಚದರ ಅಡಿಗೆ ರೂ.300/– ರಂತೆ ದರ ವಿಧಿಸಿ ತುಮಕೂರು ನಗರಸಭೆಯ ಮುಖಾಂತರ ಮಂಜೂರು ಮಾಡಲು ಸರ್ಕಾರದ ಅನುಮತಿ ಕೋರಿರುತ್ತಾರೆ.

ತದನಂತರ ಸದರಿ ಪ್ರಾಧಿಕಾರವು ದಿನಾಂಕ: 24–5–2007 ರಂದು ಜರುಗಿದ ಮತ್ತೊಂದು ಸಭೆಯಲ್ಲಿ ಸದರಿ ನಿವೇಶನಗಳ ಬೆಲೆಯನ್ನು ಶೇ.50ರಷ್ಟು ಕಡಿಮೆ ಮಾಡಿ ಚದರ ಅಡಿಗೆ ರೂ.150/– ರಂತೆ ತುಮಕೂರು ನಗರಸಭೆಯ ಮುಖಾಂತರ ಆಸ್ತಿಗಳನ್ನು ಕಳೆದುಕೊಂಡ ಭೂ ಮಾಲೀಕರಿಗೆ ಮಂಜೂರು ಮಾಡಲು ತೀರ್ಮಾನಿಸಿದೆ. ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ (ನಿವೇಶನ ಹಂಚಿಕೆ) ನಿಯಮಗಳು, 1991 ರನ್ವಯ ಸದರಿ 8 ನಿವೇಶನಗಳನ್ನು ಶೇ.50 ರಷ್ಟು ಕಡಿಮೆ ಬೆಲೆಯಲ್ಲಿ ಮಂಜೂರು ಮಾಡಲು ಅವಕಾಶವಿರುವುದಿಲ್ಲ. ಹಾಗೂ ಸದರಿ 8 ನಿವೇಶನಗಳನ್ನು ಪ್ರಾಧಿಕಾರದ ಸಭೆಯ ತೀರ್ಮಾನದಂತೆ ತುಮಕೂರು ನಗರಸಭೆಗೆ ಮಂಜೂರು ಮಾಡಿದಲ್ಲಿ ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ (ನಿವೇಶನ ಹಂಚಿಕೆ) ನಿಯಮಗಳು, 1991ರ ನಿಯಮ 4 ರನ್ವಯ ಬಡಾವಣೆಯ ಒಟ್ಟಾರೆ ವಿಸ್ತೀರ್ಣದ ಶೇ.10ನ್ನು ಮೀರುವುದಿಲ್ಲ. ಆದ್ದರಿಂದ ಆಯುಕ್ತರು, ತುಮಕೂರು ನಗರಾಭಿವೃದ್ಧಿ ಪ್ರಾಧಿಕಾರ ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ 15 ಬೆಂರೂಪ್ರಾ 2007, ಬೆಂಗಳೂರು, ದಿನಾಂಕ: 30ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ತುಮಕೂರು ಉಪ್ಪಾರಹಳ್ಳಿ ರೈಲ್ವೆ ಮೇಲೆ ಸೇತುವೆ ನಿರ್ಮಾಣಕ್ಕೆ ಸಂಬಂಧಿಸಿದಂತೆ ಆಸ್ತಿಗಳನ್ನು ಕಳೆದುಕೊಂಡ ಭೂ ಮಾಲೀಕರುಗಳಿಗೆ ತುಮಕೂರು ನಗರಸಭೆಯ ವತಿಯಿಂದ ಪರ್ಯಾಯ ನಿವೇಶನಗಳನ್ನು ಹಂಚಿಕೆ ಮಾಡಲು ತುಮಕೂರು ನಗರಾಭಿವೃದ್ಧಿ ಪ್ರಾಧಿಕಾರವು ನಿರ್ಮಿಸಿರುವ ಮೆಳೇಕೋಟೆ–ವೀರಸಾಗರ ವಸತಿ ಬಡಾವಣೆಯಲ್ಲಿನ 40x60 ಚದರ ಅಡಿ ವಿಸ್ತೀರ್ಣದ 8 ನಿವೇಶನಗಳನ್ನು ಪ್ರತಿ ಚದರ ಅಡಿಗೆ ರೂ.300/– ರಂತೆ ದರ ವಿಧಿಸಿ ತುಮಕೂರು ನಗರಸಭೆಗೆ ಮಂಜೂರು ಮಾಡಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಈ ಆದೇಶವನ್ನು ಸಚಿವ ಸಂಪುಟದ ಪ್ರಕರಣ ಸಂಖ್ಯೆ. ಸಿ:405/2009, ದಿನಾಂಕ: 15–9–2009 ರಲ್ಲಿ ಕೈಗೊಂಡ ನಿರ್ಣಯದಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2319

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**INFORMATION TECHNOLOGY, BIOTECHNOLOGY & SCIENCE & TECHNOLOGY SECRETARIAT**

**Sub:** Appointment of consultant to conduct techno economic pre-feasibility survey of proposed ITIR in the Bangalore- BIAL Area- Reg.

**Read:**
1. Government of India Notification No. 7(5) 2006 –E-Infra-Policy objectives, dated. 28.05.2008 from the Ministry of Communication and Information Technology, Department of IT.
2. Government letter No. ITD 22 MDA 2008, dated.15.12.2008.
3. KEONICS letter No.KSEDC/ITIR/08-09, dt. 16.12.2008.
4. KEONICS letter No. KSEDC/ITIR/ BIAL- 09-10, dt.22.10.2009.

**Preamble:**

Government of India with an intention to promote investment in the IT / ITES / EMH units and to attract major investments has announced a polisy for setting up of ITIR regions which would be specifically delineated investments regions with a minimum area of around 40 sq. k.ms., vide Government of India Notification dated.28.05.2008 referred at (1) above.

Accordingly State Government decided to notify the area near Bangalore- BIAL Area as ITIR and KEONICS was directed vide letter referred at (2) above, to invite tenders from reputed agencies for conducting techno economic pre-feasiblity survey as per the policy guidelines of Government of India.

KEONICS vide letter referred at (3) above, sought the permission of Government to call for EOI, for appointing counsultant for conducting Techno economic Per-feasibility survey and KEONICS was permitted vide Government letter dated.20.12.2008.

MD,KEONICS vide letter dated. 22.10.2009 has reported that the tender process was initiated and at the time of finalizations of the tender it was felt that the current process of selection of the consultant was not comprehensive in scope and hence fresh financial bids were invited from 6 transaction advisors listed in the Government of India panel of transaction advisors for PPP projects, Further approval of the RFP documents & the financial bids were invited from the following transactions advisors, who are empanelled by Government of India.

1) M / S. Deloitte Touche tohmatsu India Private Limited, India.
2) M / s.Ernst & Young Privated Limited, India.
3) M / s. Infrastructure Devlopment Finance Company (IDFC) Ltd., India.
4) M / s. Price Water House Coopers Private Limited, India.
5) M / s.CRISIL Infrastructure Advisory, India.
6) M / s. International Finance Corporation.

Out of the 6 advisors mentioned above, the following 3 advisors submitted their proposals.

1) M / s. Deloitte Touche Tohmatsu India Private, Limited India.
2) M / s.Ernst & Young Private Limited, India.
3) M /s.Price Water House Coopers Private Limited, India.

After scrutinising, the tenders accpepting authority noted that M S.Deloitte Touche Tohmatsu India Private Limited, India. Who had quoted Rs.36,80,000 / - was the lowest.

Hence MD, KEONICS has sought orders of Government for appointment of M / S. Deloitte Touche Tohmatsu India Private Limited, India as consultant to conduct Techno economic Pre-feasibility survey in Bangalore-BIAL Area and also to release a grant of Rs.36,80,000 / - in order to facilitate KEONICS to enter into an agreement with M / S.Deloitte Touche Tohmatsu India Private Limited, India.

Hence the following order:

**Government Order No: ITD : 22 MDA : 2008, Bangalore, Dated: 23rd October 2009**

In the circumstances explained in the Preamble, Government are pleased to permit KEONICS to appoint M / S. Deloitte Touche Tohmatsu India Private Limited, India. As consultant to conducting the Techno economic Pre-feasibility survey for ITIR in Bangalore – BIAL area and to release an amount of Rs. 36,80,000/- (Rupees Thirty Six Lakhs and Eighty Thousand only) to KEONICS to meet the above expenditure subject to following conditions:-

1) **Mode of payments:**

   25% after approval of draft project proposal
   45% after approval of final project proposal
   30% after notification of ITIR by Government of India.

2) **Time Schedule:**

   Submmission of draft report - 20 days from the date of agreement.
   Submission of final report - 15 days after approval of the draft report.

3) **Scope of work** - shall clearly be defined by Managing Director, KEONICS.

4) **Penalty Clause** - to be incorporated for non- performance and non- adherence of time schedule .

The Administrative Officers, Directorate of Information Technology and Biotechnology Department shall draw the said grant from the Treasury duly countersigned by the Director, Information Technology and Biotechnology and disburse the amount.

The Managing director, KEONICS shall submit the Utilization Certificate in the prescribed format through the Director Information Technology and Biotechnology, Bangalore.

The expenditure on this account shall be debited to Head of Account **"3451-00-090-2-01-IT Promotion and Development–059–Other Expenses (Plan) for 2009-10"**

This order issues presuming the concurrence of Finance Department Vide No. FD 1 TFP 2008, dated: 16.05.2008.

By Order and in the name of the Governor of Karnataka,

**M.V. KRISHNAMURTHY**

P.R. 2429

Under Secretary to Government

Information Technology, Biotechnology and Science & Technology Department.

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಪುತ್ತೂರು ತಾಲ್ಲೂಕು, ಉಪ್ಪಿನಂಗಡಿ ಹೋಬಳಿ, ಕಸಬ ಗ್ರಾಮದ ಸ.ನಂ.178:1ಬಿ2ರಲ್ಲಿ 1.18ಎಕರೆ ಹಾಗೂ 178:5ರಲ್ಲಿ 1.08 ಎಕರೆ, ಒಟ್ಟು 2.26 ಎಕರೆ ವಿಸ್ತೀರ್ಣದ ಜಮೀನನ್ನು ಕೃಷಿಯಿಂದ ವಸತಿ ವಲಯಕ್ಕೆ ಭೂ ಉಪಯೋಗ ಬದಲಾವಣೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸದಸ್ಯ ಕಾರ್ಯದರ್ಶಿ, ಯೋಜನಾ ಪ್ರಾಧಿಕಾರ, ಪುತ್ತೂರು ಸ್ಥಳೀಯ ಯೋಜನಾ ಪ್ರದೇಶ, ಇವರ ಇವರ ಪತ್ರ ಸಂಖ್ಯೆ: ಸ್ಥ.ಯೋ.ಪ್ರಾ.ಪು:ಭೂ.ಉ.ಬಃ80:2009–10, ದಿನಾಂಕ 27–07–2009.

2) ದಿನಾಂಕ: 25–09–2009ರಂದು ಕಡತ ಸಂಖ್ಯೆ: ನಗ್ರಾಯೋ(17):ಭೂ:ಉಬ:ಕಬಕ:306:2009ರಲ್ಲಿ ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರು ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಸದಸ್ಯ ಕಾರ್ಯದರ್ಶಿ, ಯೋಜನಾ ಪ್ರಾಧಿಕಾರ, ಪುತ್ತೂರು ಸ್ಥಳೀಯ ಯೋಜನಾ ಪ್ರದೇಶ, ಇವರು ಪುತ್ತೂರು ತಾಲ್ಲೂಕು, ಉಪ್ಪಿನಂಗಡಿ ಹೋಬಳಿ, ಕಸಬ ಗ್ರಾಮದ ಸ.ನಂ.178:1ಬಿ2ರಲ್ಲಿ 1.18 ಎಕರೆ ಹಾಗೂ 178:5ರಲ್ಲಿ ಎಕರೆ, ಒಟ್ಟು 2.26 ಎಕರೆ ವಿಸ್ತೀರ್ಣದ ಜಮೀನನ್ನು ಕೃಷಿಯಿಂದ ವಸತಿ ವಲಯಕ್ಕೆ ಭೂ ಉಪಯೋಗ ಬದಲಾವಣೆ ಮಾಡುವ ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(ಎ)ರನ್ವಯ ಸಾರ್ವಜನಿಕ ಪ್ರಕಟಣೆಯನ್ನು ಹೊರಡಿಸಿದ್ದು, ಈ ಪ್ರಕಟಣೆಗೆ ನಿಗದಿತ ಅವಧಿಯಲ್ಲಿ ಯಾವುದೇ ಆಕ್ಷೇಪಣೆ ಬಂದಿರುವುದಿಲ್ಲವೆಂದು ತಿಳಿಸುತ್ತಾ, ಪ್ರಸ್ತಾವನೆಯನ್ನು ಶಿಫಾರಸು ಮಾಡಿ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಕಡತದಲ್ಲಿ ನಗರ ಯೋಜನಾ ನಿರ್ದೇಶಕರು ಪ್ರಸ್ತಾವನೆಯನ್ನು ಪರಿಗಣಿಸಬಹುದೆಂದು ಶಿಫಾರಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ:ನಅಇ 475 ಮೈಅಪ್ರಾ 2009, ಬೆಂಗಳೂರು, ದಿನಾಂಕ: 16ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(1)(ಎ)ರ ಪ್ರಕಾರ ಪುತ್ತೂರು ತಾಲ್ಲೂಕು, ಉಪ್ಪಿನಂಗಡಿ ಹೋಬಳಿ, ಕಸಬ ಗ್ರಾಮದ ಸ.ನಂ. 178:1ಬಿ2ರಲ್ಲಿ 1.18 ಎಕರೆ ಹಾಗೂ 178:5ರಲ್ಲಿ 1.08 ಎಕರೆ, ಒಟ್ಟು 2.26 ಎಕರೆ ವಿಸ್ತೀರ್ಣದ ಜಮೀನನ್ನು ಕೃಷಿಯಿಂದ ವಸತಿ ವಲಯಕ್ಕೆ ಭೂ ಉಪಯೋಗ ಬದಲಾವಣೆ ಮಾಡಲು ಈ ಕೆಳಕಂಡ ಷರತ್ತುಗೊಳಪಟ್ಟು ಸರ್ಕಾರದ ಅನುಮೋದನೆ ನೀಡಲಾಗಿದೆ.

1) ಪ್ರಸ್ತಾಪಿತ ಜಮೀನಿನ ಭೂ ಉಪಯೋಗ ಬದಲಾವಣೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯ, 1961ರ ಪ್ರಕರಣ 18ರನ್ವಯ ನಿಗದಿತ ಶುಲ್ಕವನ್ನು ಪ್ರಾಧಿಕಾರಕ್ಕೆ ಅರ್ಜಿದಾರರು ಪಾವತಿಸತಕ್ಕದ್ದು.

2) ಸದರಿ ಭೂ ಉಪಯೋಗ ಬದಲಾವಣೆಯನ್ನು ಮಹಾ ಯೋಜನೆಯಲ್ಲಿ ಅಳವಡಿಸಿಕೊಳ್ಳತಕ್ಕದ್ದು.

3) ಅರ್ಜಿದಾರರು ಪ್ರಸ್ತಾಪಿತ ಜಮೀನಿನಲ್ಲಿ ಯಾವುದೇ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುವ ಮುನ್ನ ವಲಯ ನಿಯಮಾವಳಿಗಳನ್ವಯ ವಸತಿ ವಿನ್ಯಾಸಕ್ಕೆ ಪುತ್ತೂರು ಸ್ಥಳೀಯ ಯೋಜನಾ ಪ್ರದೇಶ ಪ್ರಾಧಿಕಾರದಿಂದ ಅನುಮೋದನೆ ಪಡೆಯತಕ್ಕದ್ದು.

4) ಪ್ರಸ್ತಾಪಿತ ಜಮೀನಿನಲ್ಲಿ ಮಳೆ ನೀರು ಸಂಗ್ರಹಣೆಗೆ ಅಗತ್ಯ ಕ್ರಮ ಕೈಗೊಳ್ಳತಕ್ಕದ್ದು.

5) ಹಾಲಿ 7.5 ಮೀ. ಅಗಲದ ಸಂಪರ್ಕ ರಸ್ತೆಯನ್ನು 9.0 ಮೀ.ಗೆ ವಿಸ್ತರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2448

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀಮತಿ ಎಸ್. ಪುಷ್ಪಲತಾ, ಸಹಾಯಕ ಸರ್ಕಾರಿ ಅಭಿಯೋಜಕರು, 2ನೇ ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಮೈಸೂರು ಅವರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಆದೇಶ ಸಂಖ್ಯೆ: ಒಇ 845 ಪಿಪಿಇ 2005, ದಿನಾಂಕ: 03–05–2006.

2) ನಿರ್ದೇಶಕರು, ಅಭಿಯೋಗ ಇಲಾಖೆ ಇವರ ಪತ್ರ ಸಂಖ್ಯೆ: ಡಿಪಿಎನ್.ಸಿಶಾ.1.37(34):2008–09 ದಿನಾಂಕ: 26–06–2009.

**ಪ್ರಸ್ತಾವನೆ:**

ಶ್ರೀಮತಿ ಎಸ್. ಪುಷ್ಪಲತಾ, ಸಹಾಯಕ ಸರ್ಕಾರಿ ಅಭಿಯೋಜಕರು, 2ನೇ ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಮೈಸೂರು, ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ: 03–05–2006ರ (ಕ್ರ.ಸಂ.34) ಅಧಿಸೂಚನೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕಗೊಂಡು ದಿನಾಂಕ: 15–05–2006ರ ಅಪರಾಹ್ನದಿಂದ ಕಾರ್ಯನಿರ್ವಹಿಸುತ್ತಿದ್ದಾರೆ. ಈ ಅಧಿಕಾರಿಯು ಎರಡು ವರ್ಷಗಳ ಪರಿವೀಕ್ಷಣಾ ಅವಧಿಯನ್ನು ನಿಯಮಾನುಸಾರ ದಿನಾಂಕ: 15–05–2008ರಂದು ಪೂರೈಸಬೇಕಾಗಿದ್ದು, ಸದರಿ ಅಧಿಕಾರಿಯು ಹುದ್ದೆಗೆ ನಿಗಧಿಪಡಿಸಲಾಗಿದ್ದ ಪರೀಕ್ಷೆಗಳಲ್ಲೊಂದಾದ ಅಕೌಂಟ್ಸ್ ಹೈಯರ್ ಪರೀಕ್ಷೆಯನ್ನು ಪಾಸು ಮಾಡಿರುವುದಿಲ್ಲ. ಅಕೌಂಟ್ಸ್ ಹೈಯರ್ ಇಲಾಖಾ ಪರೀಕ್ಷೆಯನ್ನು 2008ರ 2ನೇ ಅಧಿವೇಶನದಲ್ಲಿ ತೆಗೆದುಕೊಂಡಿದ್ದು, ಅದರ ಫಲಿತಾಂಶ ಬರಬೇಕಾಗಿರುವುದರಿಂದ ಇವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ: 15–05–2008ರಿಂದ ದಿನಾಂಕ: 14–11–2009ರವರೆಗೆ ಅಥವಾ ಪ್ರಸ್ತುತ ತೆಗೆದುಕೊಂಡಿರುವ ಇಲಾಖಾ ಪರೀಕ್ಷೆಯಲ್ಲಿ ಉತ್ತೀರ್ಣರಾಗುವವರೆಗೆ, ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಕರ್ನಾಟಕ ಸರ್ಕಾರಿ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 4ರ ಉಪನಿಯಮ (1)(i)ರ ರೀತ್ಯಾ ವಿಸ್ತರಣೆ ಮಾಡುವಂತೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು ಮೇಲೆ (2)ರಲ್ಲಿ ಓದಲಾದ ಪತ್ರಗಳಲ್ಲಿ ಕೋರಿರುತ್ತಾರೆ.

ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 328 ಪಿಪಿಇ 2009, ಬೆಂಗಳೂರು, ದಿನಾಂಕ: 23ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಕರ್ನಾಟಕ ನಾಗರೀಕ ಸೇವೆಗಳ (ಪರಿವೀಕ್ಷಣಾ) ನಿಯಮಗಳು 1977ರ 4ನೇ ನಿಯಮದ ಉಪ ನಿಯಮ (1)(i)ರನ್ವಯ ಶ್ರೀಮತಿ ಎಸ್. ಪುಷ್ಪಲತಾ, ಸಹಾಯಕ ಸರ್ಕಾರಿ ಅಭಿಯೋಜಕರು, 2ನೇ ಸಿಜೆ (ಕಿವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ಮೈಸೂರು ಇವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ: 15–05–2008 ರಿಂದ ದಿನಾಂಕ: 14–11–2009ರವರೆಗೆ ವಿಸ್ತರಿಸಲಾಗಿದೆಯೆಂದು ಸರ್ಕಾರವು ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ**

ಪಿ.ಆರ್. 2471

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ,
(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗ)

**ವಿಷಯ:** ಶ್ರೀ ಎಸ್. ರಾಜಣ್ಣ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಅರಸೀಕೆರೆ ಅವರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಆದೇಶ ಸಂಖ್ಯೆ: ಒಇ 845 ಪಿಪಿಇ 2005, ದಿನಾಂಕ: 03–05–2006.

2) ನಿರ್ದೇಶಕರು, ಅಭಿಯೋಗ ಇಲಾಖೆ ಇವರ ಪತ್ರ ಸಂಖ್ಯೆ: ಡಿಪಿಎನ್.ಸಿಶಾ.1.37(41):2008–09 ದಿನಾಂಕ: 09–07–2009.

**ಪ್ರಸ್ತಾವನೆ:**

ಶ್ರೀ ಎಸ್. ರಾಜಣ್ಣ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಅರಸೀಕೆರೆ, ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ:03–05–2006ರ ಅಧಿಸೂಚನೆ ಕ್ರ.ಸಂ.41ರಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕಗೊಂಡು ದಿನಾಂಕ:11–05–2006ರ ಪೂರ್ವಾಹ್ನದಿಂದ ಕಾರ್ಯನಿರ್ವಹಿಸುತ್ತಿದ್ದಾರೆ. ಈ ಅಧಿಕಾರಿಯು ಎರಡು ವರ್ಷಗಳ ಪರಿವೀಕ್ಷಣಾ ಅವಧಿಯನ್ನು ನಿಯಮಾನುಸಾರ ದಿನಾಂಕ:10–05–2008ರಂದು ಪೂರೈಸಬೇಕಾಗಿದ್ದು, ಸದರಿ ಅಧಿಕಾರಿಯು ಹುದ್ದೆಗೆ ನಿಗಧಿಪಡಿಸಲಾಗಿದ್ದ ಇಲಾಖಾ ಪರೀಕ್ಷೆಗಳಲ್ಲೊಂದಾದ ಅಕೌಂಟ್ಸ್ ಹೈಯರ್ ಪರೀಕ್ಷೆಯಲ್ಲಿ ಉತ್ತೀರ್ಣರಾಗದೆ ಇರುವುದರಿಂದ ಇವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ:11–05–2008 ದಿನಾಂಕ:10–11–2009 ರವರೆಗೆ ವಿಸ್ತರಿಸಬೇಕಾಗಿರುತ್ತದೆ. ಆದುದರಿಂದ, ಸದರಿ ಅಧಿಕಾರಿಯವರ ಪರಿವೀಕ್ಷಣಾ ಅವಧಿಯನ್ನು ಎರಡು ವರ್ಷಗಳ ಪರಿವೀಕ್ಷಣಾ ಅವಧಿ ಮುಗಿದ ದಿನಾಂಕದಿಂದ ದಿನಾಂಕ: 11–05–2008ರಿಂದ 10–11–2009ರವರೆಗೆ ಕರ್ನಾಟಕ ಸರ್ಕಾರಿ ಸೇವಾ (ಪರಿವೀಕ್ಷಣಾ) ನಿಯಮಗಳು, 1997ರ ನಿಯಮ 4ರ ಉಪನಿಯಮ (1)(i)ರ ರೀತ್ಯಾ ವಿಸ್ತರಣೆ ಮಾಡುವಂತೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು ಮೇಲೆ (2)ರಲ್ಲಿ ಓದಲಾದ ಪತ್ರಗಳಲ್ಲಿ ಕೋರಿರುತ್ತಾರೆ.

ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 350 ಪಿಪಿಇ 2009, ಬೆಂಗಳೂರು, ದಿನಾಂಕ: 23ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಕರ್ನಾಟಕ ನಾಗರೀಕ ಸೇವೆಗಳ (ಪರಿವೀಕ್ಷಣಾ) ನಿಯಮಗಳು 1977ರ 4ನೇ ನಿಯಮದ ಉಪ ನಿಯಮ (1)(i)ರನ್ವಯ ಶ್ರೀ ಎಸ್. ರಾಜಣ್ಣ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ಅರಸೀಕೆರೆ ಇವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ: 11–05–2008ರಿಂದ ದಿನಾಂಕ:10–11–2009ರವರೆಗೆ ವಿಸ್ತರಿಸಲಾಗಿದೆಯೆಂದು ಸರ್ಕಾರವು ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ**

ಪಿ.ಆರ್. 2472

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ,
(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಮೂಲಭೂತ ಸೌಲಭ್ಯ ಅಭಿವೃದ್ಧಿ ಇಲಾಖೆಗೆ ಹೆಚ್ಚುವರಿ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 15 ಸಸಿವಿ 96, ದಿನಾಂಕ: 20–09–1996.

2. ಪ್ರಧಾನ ಕಾರ್ಯದರ್ಶಿ, ಮೂಲಭೂತ ಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಪತ್ರ ಸಂಖ್ಯೆ: ಐಡಿಡಿ: 61:ಐಟಿಎಸ್:2009, ದಿನಾಂಕ: 06–07–2009.

**ಪ್ರಸ್ತಾವನೆ:**

ಮೇಲೆ ಕ್ರಮಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 20–09–1996ರ ಆದೇಶದಲ್ಲಿ ಹೊಸದಾಗಿ ಮೂಲಭೂತ ಸೌಲಭ್ಯ ಅಭಿವೃದ್ಧಿ ಇಲಾಖೆಯನ್ನು ಮತ್ತು 37 ಹುದ್ದೆಗಳನ್ನು ಸೃಜಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಪತ್ರದಲ್ಲಿ ಮೂಲಭೂತ ಸೌಲಭ್ಯ ಅಭಿವೃದ್ಧಿ ಇಲಾಖೆಯ 200 ಹೆಚ್ಚಿನ ಯೋಜನೆಗಳನ್ನು ಜಾರಿಗೊಳಿಸಲು ಅನುಕೂಲ ಕಲ್ಪಿಸುವುದರೊಂದಿಗೆ, ರೈಲ್ವೇ ವಿಮಾನ ನಿಲ್ದಾಣ ಮತ್ತು ಅನಿಲ ಸರಬರಾಜು ಯೋಜನೆಗಳನ್ನು ಕಾರ್ಯಗತ ಗೊಳಿಸುತ್ತಿರುವುದರಿಂದ, ಇಲಾಖೆಗೆ ಹೆಚ್ಚುವರಿಯಾಗಿ 6 ಹುದ್ದೆಗಳನ್ನು ಸೃಜಿಸುವಂತೆ ಕೋರಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 370 ಸಅಸೇ 2009, ಬೆಂಗಳೂರು, ದಿನಾಂಕ: 27ನೇ ಅಕ್ಟೋಬರ್ 2009**

ಕರ್ನಾಟಕ ಸರ್ಕಾರ ಸಚಿವಾಲಯದ ಮೂಲಭೂತ ಸೌಲಭ್ಯ ಅಭಿವೃದ್ಧಿ ಇಲಾಖೆಗೆ ಈ ಕೆಳಕಂಡ ಹುದ್ದೆಗಳನ್ನು ಹೆಚ್ಚುವರಿಯಾಗಿ ಸೃಜಿಸಲಾಗಿದೆ.

| | | |
|---|---|---|
| 1. | ಅಧೀನ ಕಾರ್ಯದರ್ಶಿ | 01 |
| 2. | ಶಾಖಾಧಿಕಾರಿ | 02 |
| 3. | ಹಿರಿಯ ಸಹಾಯಕರು | 01 |
| 4. | ಕಿರಿಯ ಸಹಾಯಕರು | 01 |
| 5. | ಶೀಘ್ರಲಿಪಿಗಾರರು | 01 |

ಈ ಮೇಲ್ಕಂಡ ಹುದ್ದೆಗಳಲ್ಲಿ ಕ್ರಮ ಸಂಖ್ಯೆ: (3)(4) ಹಾಗೂ (5)ರಲ್ಲಿಯ ಹುದ್ದೆಗಳನ್ನು ಮರುಹೊಂದಾಣಿಕೆ ಮೂಲಕ (By Redeployment) ಭರ್ತಿ ಮಾಡಲು ಸೂಚಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1025 ವೆಚ್ಚ–12/09, ದಿನಾಂಕ:21–08–2009 ಮತ್ತು ಆಇ 1157 ವೆಚ್ಚ –12/09, ದಿನಾಂಕ: 08–10–2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 2473 ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಮೋತಿರಾಂ ಪವಾರ್, ಜಂಟಿ ಕಾರ್ಯದರ್ಶಿ (ದಿವಂಗತ) ಇವರ ವಿರುದ್ಧ ಇಲಾಖಾ ವಿಚಾರಣೆ – ಮಂಡನಾಧಿಕಾರಿ ನೇಮಕ – ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 107 ಎಸ್‌ಇಎನ್ 2001, ದಿನಾಂಕ 3–8–2002.

2. ಅ.ಟಿ. ಸಂಖ್ಯೆ ಸಿಆಸುಇ 576 ಪಿಎಫ್‌ಎಸ್ 95, ದಿನಾಂಕ 1–10–2009, ಉಪಕಾರ್ಯದರ್ಶಿ, ಸಿಆಸುಇ (ಆಡಳಿತ ಸುಧಾರಣೆ) ಇವರಿಂದ.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ 3–8–2002ರ ಸರ್ಕಾರಿ ಆದೇಶದಲ್ಲಿ ಶ್ರೀ ಮೋತಿರಾಂ ಪವಾರ್, ಜಂಟಿ ಕಾರ್ಯದರ್ಶಿ (ದಿವಂಗತ) ಇವರ ವಿರುದ್ಧ ಇಲಾಖಾ ವಿಚಾರಣೆಯಲ್ಲಿ ಶ್ರೀ ಎಂ. ನಟರಾಜಮೂರ್ತಿ, ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿಯೂ, ಶ್ರೀ ಹೆಚ್. ಕೃಷ್ಣಮೂರ್ತಿ, ಉಪಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಆಡಳಿತ ಸುಧಾರಣೆ) ಅವರನ್ನು ಮಂಡನಾಧಿಕಾರಿಯನ್ನಾಗಿಯೂ ನೇಮಕ ಮಾಡಲಾಗಿತ್ತು, ಉಪಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ) ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ 1–10–2009ರ ಅನಧಿಕೃತ ಟಿಪ್ಪಣಿಯಲ್ಲಿ ಶ್ರೀ ಹೆಚ್. ಕೃಷ್ಣಮೂರ್ತಿ ಅವರು ವಯೋ ನಿವೃತ್ತಿ ಹೊಂದಿದ್ದು ಬದಲಿ ಮಂಡನಾಧಿಕಾರಿಯನ್ನು ನೇಮಿಸಿದೆ ಪ್ರಕರಣವನ್ನು ಮಂಡಿಸಲು ತಮಗೆ ಸಾಧ್ಯವಾಗದಿರುವ ಕಾರಣ ತಮ್ಮನ್ನು ಮಂಡನಾಧಿಕಾರಿಯಾಗಿ ನೇಮಿಸಿ ಪರಿಷ್ಕೃತ ಆದೇಶ ಹೊರಡಿಸಬೇಕಾಗಿ ಕೋರಿದ್ದಾರೆ, ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 107 ಎಸ್‌ಇಎನ್ 2001, ಬೆಂಗಳೂರು, ದಿನಾಂಕ: 27ನೇ ಅಕ್ಟೋಬರ್ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸನ್ನಿವೇಶಗಳ ಹಿನ್ನೆಲೆಯಲ್ಲಿ ದಿನಾಂಕ 3–8–2002ರ ಸರ್ಕಾರಿ ಆದೇಶವನ್ನು ಮಾರ್ಪಡಿಸಿ ಉಪಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಆಡಳಿತ ಸುಧಾರಣೆ) ಅವರನ್ನು ಈ ಪ್ರಕರಣದಲ್ಲಿ ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ದಿನಾಂಕ:3.8.2002ರ ಆದೇಶದಲ್ಲಿ ಈಗಾಗಲೇ ನಿರ್ದೇಶಿಸಿರುವಂತೆ ಎಲ್ಲಾ ಸಹಕಾರಗಳನ್ನು ನೀಡುವುದರೊಂದಿಗೆ ಪ್ರಕರಣವನ್ನು ಮಂಡಿಸಿ 6 ತಿಂಗಳ ಒಳಗಾಗಿ ವಿಚಾರಣೆಯನ್ನು ಮುಕ್ತಾಯಗೊಳಿಸಿ ವರದಿ ಸಲ್ಲಿಸಲು ಎಲ್ಲಾ ಕ್ರಮಗಳನ್ನು ಕೈಗೊಳ್ಳುತ್ತಾರೆ.

ಉಳಿದಂತೆ ಶ್ರೀ ಎಂ. ನಟರಾಜಮೂರ್ತಿ, ನಿವೃತ್ತ ನ್ಯಾಯಾಧೀಶರೇ ವಿಚಾರಣಾಧಿಕಾರಿಯಾಗಿ ಮುಂದುವರೆಯುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 2474 ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಎನ್. ನಾಗಣ್ಣ, ನಿವೃತ್ತ ಮುಖ್ಯ ಇಂಜಿನಿಯರ್ ಇವರ ವಿರುದ್ಧ ಇಲಾಖಾ ವಿಚಾರಣೆ – ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಯನ್ನು ನೇಮಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1. ನೋಟೀಸ್ ಸಂಖ್ಯೆ ಸಿಆಸುಇ 24 ಇಮುವಿ 2008, ದಿನಾಂಕ 1–7–2009,

2. ಶ್ರೀ ಎನ್. ನಾಗಣ್ಣ, ನಿವೃತ್ತ ಮುಖ್ಯ ಇಂಜಿನಿಯರ್ ಇವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ:20.7.2009.

**ಪ್ರಸ್ತಾವನೆ:**

ಶ್ರೀ ಎನ್. ನಾಗಣ್ಣ, ನಿವೃತ್ತ ಮುಖ್ಯ ಇಂಜಿನಿಯರ್ ಅವರು ಕರ್ನಾಟಕ ನೀರಾವರಿ ನಿಗಮ, ನೀರಾವರಿ ಉತ್ತರ ವಲಯ ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ, ಬಳ್ಳಾರಿ ನಾಲಾ ಅಣೆಕಟ್ಟು ಹಾಗೂ ಕಾಲುವೆ ಯೋಜನೆಯ ಕಾಮಗಾರಿಗಳನ್ನು ನಿರ್ವಹಿಸುವಾಗ ಕಾಮಗಾರಿಗಳ ಪರಿಮಾಣಗಳ ನಿಖರತೆ ಹಾಗೂ ತೃಪ್ತಿಕರ ಗುಣಮಟ್ಟದ ಬಗ್ಗೆ ಮನದಟ್ಟು ಮಾಡಿಕೊಳ್ಳದೆ

ಕೇವಲ ಆಕ್ಷೇಪಣೆಗಳನ್ನು ದಾಖಲಿಸಿ ಲೋಕೋಪಯೋಗಿ ಇಲಾಖೆಯ ಸಂಹಿತೆಯನ್ನು ಉಲ್ಲಂಘಿಸಿದೆ; ಅಣೆಕಟ್ಟು ಹಾಗೂ ನಾಲಾ ನಿರ್ಮಾಣ ಕಾರ್ಯದ ಲೈನ್ ಅಂದಾಜು ಪತ್ರಿಕೆಯ ಮಂಜೂರಾತಿಯಂತೆ ಕಾಂಪನೆಂಟ್‌ವೈಸ್ ವಿನ್ಯಾಸ ನಕ್ಷೆ ಮತ್ತು ಅಂದಾಜುಗಳನ್ನು ತಯಾರಿಸಿ ಅದಕ್ಕೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆಯುವ ಕಾಮಗಾರಿಗಳನ್ನು 2 ವರ್ಷಗಳೊಳಗೆ ಮುಗಿಸಲು ಹಾಕಿಕೊಂಡ ಕಾರ್ಯಕ್ರಮ ಪಟ್ಟಿಗೆ ಸಕ್ಷಮ ಪ್ರಾಧಿಕಾರದ ಅನುಮೋದನೆಯನ್ನು ಪಡೆಯದೆ ಇದ್ದರೂ ಸಹ ಗುತ್ತಿಗೆದಾರರಿಗೆ ಬಿಲ್ಲುಗಳನ್ನು ಪಾವತಿಸಲು ಶಿಫಾರಸ್ಸು ಮಾಡಿದ; ಗುತ್ತಿಗೆದಾರನೊಂದಿಗೆ ಯಾವುದೇ ಪತ್ರ ವ್ಯವಹಾರ ಮಾಡದೆ ಪ್ರಾರಂಭವಾದ 3 ವರ್ಷಗಳ ನಂತರವೂ ಕಾಮಗಾರಿಯ ಅಂದಾಜು ಪೂರ್ಣಗೊಳ್ಳದ ಬಗ್ಗೆ ಪ್ರಗತಿ ಪರಿಶೀಲನಾ ಸಭೆಯಲ್ಲಾಗಲೀ, ಎಂ.ಎಂ.ಆರ್. ಸಭೆಗಳಲ್ಲಾಗಲೀ ಪರಿಶೀಲಿಸದೆ ಉಳಿದ; ಕಾಮಗಾರಿಯ ಸ್ಥಳಕ್ಕೆ ತಿಂಗಳಿಗೆ ಒಮ್ಮೆಯಾದರೂ ಭೇಟಿ ನೀಡದೆ ರೂ. 21.83 ಕೋಟಿಗಳಷ್ಟು ಮೊತ್ತವನ್ನು ಸರ್ಕಾರಕ್ಕೆ ನಷ್ಟ ಉಂಟು ಮಾಡಿದ ಆರೋಪಗಳಿಗಾಗಿ ಅವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214ರನ್ವಯ ಮೇಲೆ (1) ರಲ್ಲಿ ಓದಲಾದ ದಿನಾಂಕ 1–7–2009ರ ನೋಟೀಸ್ ನೀಡುವ ಮೂಲಕ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು.

ಶ್ರೀ ಎನ್. ನಾಗಣ್ಣ, ನಿವೃತ್ತ ಮುಖ್ಯ ಇಂಜಿನಿಯರ್ ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ 20–7–2009ರ ಪ್ರತಿರಕ್ಷಣಾ ಹೇಳಿಕೆಯನ್ನು ಸಲ್ಲಿಸಿ, ಅವರ ವಿರುದ್ಧ ಮಾಡಲಾದ ಆರೋಪಗಳನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ತೀರ್ಮಾನಿಸಿ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 24 ಇಮುವಿ 2008 (1), ಬೆಂಗಳೂರು, ದಿನಾಂಕ: 28ನೇ ಅಕ್ಟೋಬರ್ 2009**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11(2)ರೊಡನೆ ಓದಿಕೊಂಡಂತೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರಿ ಎನ್. ನಾಗಣ್ಣ, ನಿವೃತ್ತ ಮುಖ್ಯ ಇಂಜಿನಿಯರ್ ಇವರ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ವಿಚಾರಣೆ ನಡೆಸುವ ಸಲುವಾಗಿ ಶ್ರೀ ಹೆಚ್. ವಿ. ರಾಮಚಂದ್ರರಾವ್, ನಿವೃತ್ತ ನ್ಯಾಯಾಧೀಶರು, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯಾಗಿ ನೇಮಿಸುತ್ತದೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11(5) (ಸಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಕಾರ್ಯಪಾಲಕ ಇಂಜಿನಿಯರ್, ಕರ್ನಾಟಕ ನೀರಾವರಿ ನಿಗಮ, ನೀರಾವರಿ (ಉತ್ತರ) ವಲಯ, ಬೆಳಗಾವಿ ಅವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಸ್ಟೇಷನರಿ, ಶೀಘ್ರಲಿಪಿಗಾರರ ಸೇವೆಯನ್ನು ಒದಗಿಸಲು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನೀರಾವರಿ ನಿಗಮ, ಪೋಲೀಸ್ ತಿಮ್ಮಯ್ಯ ವೃತ್ತ, ಬೆಂಗಳೂರು ಅವರು ಕ್ರಮಕೈಗೊಳ್ಳುತ್ತಾರೆ. ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಶಿಸ್ತು ಪ್ರಾಧಿಕಾರಿಯಾದ ಸರ್ಕಾರಕ್ಕೆ 6 ತಿಂಗಳುಗಳ ಒಳಗಾಗಿ ಸಲ್ಲಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 2475

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ:** ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ ಮಾತಂಇ 39 ಅಚವಿ 2008, ದಿನಾಂಕ 19–1–2009.
2. ಸರ್ಕಾರಿ ಆದೇಶ ಸಂಖ್ಯೆ ಮಾತಂಇ 39 ಅಚವಿ 2008, ದಿನಾಂಕ 30–03–2009.
3. ಸರ್ಕಾರಿ ಆದೇಶ ಸಂಖ್ಯೆ ಮಾತಂಇ 39 ಅಚವಿ 2008, ದಿನಾಂಕ 22–06–2009.
4. ಸರ್ಕಾರಿ ಆದೇಶ ಸಂಖ್ಯೆ ಮಾತಂಇ 39 ಅಚವಿ 2008, ದಿನಾಂಕ 26–09–2009.
5. ಸರ್ಕಾರಿ ಆದೇಶ ಸಂಖ್ಯೆ ಮಾತಂಇ 39 ಅಚವಿ 2008, ದಿನಾಂಕ 20–10–2009.
6. ಸರ್ಕಾರಿ ಆದೇಶ ಸಂಖ್ಯೆ ಮಾತಂಇ 39 ಅಚವಿ 2008, ದಿನಾಂಕ 24–10–2009.
7. ಮಾತಂ ಜೈತಂ ನಿರ್ದೇಶನಾಲಯದ ನಿರ್ದೇಶಕರ ಪತ್ರ ಸಂಖ್ಯೆ ಕೆಬಿಟ್ಸ್/ಕೈಗೂ.ಅ/ಬಿಪಿಓಅನುದಾನ/2009–10, ದಿನಾಂಕ: 3–10–2009.

**ಪ್ರಸ್ತಾವನೆ:**

ಮೇಲೆ [1]ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸರ್ಕಾರವು 1 ಲಕ್ಷಕ್ಕಿಂತ ಕಡಿಮೆ ಜನಸಂಖ್ಯೆಯುಳ್ಳ ತಾಲ್ಲೂಕು/ಹೋಬಳಿ ಕೇಂದ್ರ ಸ್ಥಳಗಳಲ್ಲಿ ಗ್ರಾಮಾಂತರ ಬಿ.ಪಿ.ಓ. ಕೇಂದ್ರಗಳನ್ನು ಸ್ಥಾಪಿಸುವ ಹೊಸ ಯೋಜನೆಯನ್ನು ಅನುಷ್ಠಾನಗೊಳಿಸಲು ಹಾಗೂ 100 ವ್ಯಕ್ತಿಗಳಿಗೆ ಕಡಿಮೆ ಇಲ್ಲದಂತೆ ನೇರ ಉದ್ಯೋಗವನ್ನು ನೀಡುವ ಗ್ರಾಮೀಣ ಬಿ.ಪಿ.ಓ. ಕೇಂದ್ರವು ರಾಜ್ಯ ಸರ್ಕಾರದಿಂದ ಆರ್ಥಿಕ ಬೆಂಬಲಕ್ಕೆ ಅರ್ಹವಾಗಿರುವ ಬಗ್ಗೆ ಆದೇಶ ಹೊರಡಿಸಲಾಗಿದೆ.

ಮೇಲೆ [2]ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಉದ್ದೇಶಕ್ಕಾಗಿ 2008–09ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ **"5465–01–190–1–14 ಗ್ರಾಮೀಣ ಬಿಪಿಓಗಳ 059 ಇತರೆ ಖರ್ಚು [ಯೋಜನೆ]"** ಇದರಡಿಯಲ್ಲಿ ರೂ. 100 ಲಕ್ಷಗಳನ್ನು [ರೂ. ನೂರು ಲಕ್ಷಗಳು ಮಾತ್ರ] ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಲಾಗಿದೆ.

ಸ್ಕ್ರೀನಿಂಗ್ ಕಮಿಟಿಯ ಶಿಫಾರಸ್ಸಿನಂತೆ ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಬಗ್ಗೆ 2009–10ನೇ ಸಾಲಿನಲ್ಲಿ ಮೇಲೆ [3]ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ನಾಲ್ಕು ಅರ್ಹ ಅಭ್ಯರ್ಥಿಗಳ ಪ್ರಸ್ತಾವನೆ ಮತ್ತು [4]ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಎಂಟು ಅರ್ಹ ಅಭ್ಯರ್ಥಿಗಳ ಪ್ರಸ್ತಾವನೆಗೆ ಹಾಗೂ ಮೇಲೆ [6]ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಎಂಟು ಅರ್ಹ ಅಭ್ಯರ್ಥಿಗಳ ಪ್ರಸ್ತಾವನೆಗೆ ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

ಮೇಲೆ [7]ರಲ್ಲಿ ಓದಲಾದ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ ನಿರ್ದೇಶಕರ ಪತ್ರದಲ್ಲಿ ಪ್ರಾರಂಭವಾಗಲಿರುವ ಬಿಪಿಓ ಕೇಂದ್ರಗಳಿಗೆ ಆರ್ಥಿಕ ಬೆಂಬಲವನ್ನು ಬಿಡುಗಡೆ ಮಾಡುವ ಸಲುವಾಗಿ ರೂ. 500 ಲಕ್ಷಗಳ ಅನುದಾನವನ್ನು ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಲು ಈಗಾಗಲೇ ಕೋರಲಾಗಿದ್ದು, ಮೇಲೆ [5]ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಪ್ರಾರಂಭವಾಗಲಿರುವ ಬಿಪಿಓ ಕೇಂದ್ರಗಳಿಗೆ ಆರ್ಥಿಕ ಬೆಂಬಲವನ್ನು ಬಿಡುಗಡೆ ಮಾಡುವ ಸಲುವಾಗಿ 2009–10ನೇ ಸಾಲಿಗೆ ರೂ. 100 ಲಕ್ಷಗಳ ಅನುದಾನವನ್ನು ಈಗಾಗಲೇ ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಲಾಗಿದೆ. ಇಲ್ಲಿಯವರೆಗೆ ಒಟ್ಟು 20 ಗ್ರಾಮೀಣ ಬಿಪಿಓ ಪ್ರಸ್ತಾವನೆಗಳಿಗೆ ಅನುಮೋದಿಸಿದ್ದು, ಅದಕ್ಕೆ ಅನುಗುಣವಾಗಿ ಕೆಬಿಟ್ಸ್ ಸಂಸ್ಥೆಗೆ ಅನುದಾನ ಬಿಡುಗಡೆ ಮಾಡಬೇಕಾಗಿದ್ದು, 2009–10ನೇ ಸಾಲಿನಲ್ಲಿ ಒದಗಿಸಿದ ರೂ. 500 ಲಕ್ಷಗಳಲ್ಲಿ ಮತ್ತೆ ರೂ. 100 ಲಕ್ಷಗಳನ್ನು ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಐಟಿಡಿ 39 ಎಂಡಿಎ 2008, ಬೆಂಗಳೂರು, ದಿನಾಂಕ: 29ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ಹೇಳಿರುವ ಸಂದರ್ಭದಲ್ಲಿ ಇಲ್ಲಿಯವರೆಗೆ ಒಟ್ಟು 20 ಗ್ರಾಮೀಣ ಬಿಪಿಓ ಪ್ರಸ್ತಾವನೆಗಳಿಗೆ ಅನುಮೋದಿಸಿದ್ದು, ಪ್ರಾರಂಭವಾಗಲಿರುವ ಬಿಪಿಓ ಕೇಂದ್ರಗಳಿಗೆ ಆರ್ಥಿಕ ಬೆಂಬಲವನ್ನು ಬಿಡುಗಡೆ ಮಾಡುವ ಸಲುವಾಗಿ 2009–10ನೇ ಸಾಲಿನ ಆಯುವ್ಯಯದಲ್ಲಿ ಲೆಕ್ಕಶೀರ್ಷಿಕೆ **"5465–01–190–1–14 ಗ್ರಾಮೀಣ ಬಿಪಿಓಗಳ 059 ಇತರೆ ಖರ್ಚು [ಯೋಜನೆ]"** ಇದರಡಿಯಲ್ಲಿ ಒದಗಿಸಲಾಗಿರುವ ರೂ. 500 ಲಕ್ಷಗಳ ಅನುದಾನದಲ್ಲಿ ಮತ್ತೆ ರೂ. 100 ಲಕ್ಷಗಳನ್ನು [ರೂ. ನೂರು ಲಕ್ಷಗಳು ಮಾತ್ರ] ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಲು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಇವರಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ಪ್ರಧಾನ ವ್ಯವಸ್ಥಾಪಕರು, ಕೆಬಿಟ್ಸ್ ಇವರಿಗೆ ವಿತರಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ **"5465–01–190–1–14 ಗ್ರಾಮೀಣ ಬಿಪಿಓಗಳ 059 ಇತರೆ ಖರ್ಚು [ಯೋಜನೆ]"** ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಅನುದಾನದ ಬಳಕೆಯ ಬಗ್ಗೆ ಪ್ರಧಾನ ವ್ಯವಸ್ಥಾಪಕರು, ಕೆಬಿಟ್ಸ್ ಸಂಸ್ಥೆ ಇವರಿಂದ [ಸಂಬಂಧಪಟ್ಟ ಗ್ರಾಮೀಣ ಬಿಪಿಓ ಕೇಂದ್ರಗಳಿಂದ ಉಪಯೋಗಿತಾ ದೃಢೀಕರಣ ಪತ್ರಗಳನ್ನು ವೆಚ್ಚ ಮಾಡಿದ ಅನುದಾನದ ವಿವರಗಳೊಂದಿಗೆ ಪಡೆದು] ಉಪಯೋಗಿತಾ ದೃಢೀಕರಣ ಪತ್ರವನ್ನು ವೆಚ್ಚ ಮಾಡಿದ ಅನುದಾನದ ವಿವರಗಳ ಜೊತೆಗೆ ಪಡೆದು ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ ಆಇ 1 ಟಿಎಫ್‌ಪಿ 2008, ದಿನಾಂಕ 16–5–2008ರನ್ವಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 2477

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

**ವಿಷಯ:** 'ಬೆಂಗಳೂರು ಐ.ಟಿ. ಬಿಜ್ – 2009'ರ ಕಾರ್ಯಕ್ರಮದ ಅಂಗವಾಗಿ ಏರ್ಪಡಿಸಲಾಗಿರುವ ಮಾಹಿತಿ ತಂತ್ರಜ್ಞಾನದಲ್ಲಿ ಗ್ರಾಮೀಣ ವಿದ್ಯಾರ್ಥಿಗಳಿಗಾಗಿ 'ರಸಪ್ರಶ್ನೆ' ಕಾರ್ಯಕ್ರಮವನ್ನು ನಡೆಸಲು ಹೆಚ್ಚುವರಿ ಅನುದಾನ ಬಿಡುಗಡೆ ಬಗ್ಗೆ – ಆದೇಶ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ಮಾತಂಇ 26 ಅಚವಿ 2009, ಬೆಂಗಳೂರು, ದಿನಾಂಕ: 10–09–2009.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಗ್ರಾಮೀಣ ವಿದ್ಯಾರ್ಥಿಗಳ ರಸಪ್ರಶ್ನೆ ಕಾರ್ಯಕ್ರಮದಲ್ಲಿ ರಾಜ್ಯ ಮಟ್ಟದಲ್ಲಿ ವಿಜೇತರಾಗುವ ವಿದ್ಯಾರ್ಥಿಗಳಿಗೆ ಮೊದಲನೆಯ, ಎರಡನೆಯ ಮತ್ತು ಮೂರನೆಯ ಬಹುಮಾನಗಳನ್ನು ನೀಡುವ ಸಂಬಂಧ ಕಿಯೋನಿಕ್ಸ್ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಿಗೆ ರೂ. 85000–00 (ರೂ. ಎಂಬತ್ತೈದು ಸಾವಿರಗಳು ಮಾತ್ರ) ಬಿಡುಗಡೆ ಮಾಡಲಾಗಿದೆ. ಇದು ಒಂದು ಲ್ಯಾಪ್ ಟಾಪ್, ಒಂದು ನೆಟ್ ಬುಕ್ ಮತ್ತು ಒಂದು ಮೊಬೈಲ್ ಫೋನಿಗೆ ಸಾಕಾಗಿರುತ್ತದೆ. ಆದರೆ ಕಾರ್ಯಕ್ರಮದಲ್ಲಿ ಇಬ್ಬರು ವಿಜೇತರಿಗೆ ಬಹುಮಾನಗಳನ್ನು ಇಲಾಖಾ ವತಿಯಿಂದ ವಿತರಿಸಬೇಕಾಗಿರುತ್ತದೆ. ಆದುದರಿಂದ ಮತ್ತೊಬ್ಬ ಜಯಶಾಲಿ ಅಭ್ಯರ್ಥಿಗಳಿಗೆ ಬಹುಮಾನಗಳನ್ನು ನೀಡಲು ಅನುವಾಗುವಂತೆ ರೂ. 85000.00 (ರೂ. ಎಂಬತ್ತೈದು ಸಾವಿರಗಳು ಮಾತ್ರ ಹೆಚ್ಚುವರಿ ಅನುದಾನ ಬಿಡುಗಡೆ ಮಾಡಲು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 26 ಅಚವಿ 2009, ಬೆಂಗಳೂರು, ದಿನಾಂಕ: 28ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು **'ಬೆಂಗಳೂರು ಐ.ಟಿ. ಬಿಜ್–2009'ರ ಮೇಳದ** ಅಂಗವಾಗಿ ಮಾಹಿತಿ ತಂತ್ರಜ್ಞಾನದಲ್ಲಿ ಗ್ರಾಮೀಣ ವಿದ್ಯಾರ್ಥಿಗಳಿಗಾಗಿ **'ರಸಪ್ರಶ್ನೆ'** ಕಾರ್ಯಕ್ರಮದಲ್ಲಿ ರಾಜ್ಯಮಟ್ಟದ ಇನ್ನುಳಿದ **ಮತ್ತೊಬ್ಬ ಜಯಶಾಲಿ ಅಭ್ಯರ್ಥಿಗಳಿಗೆ** ಮೊದಲನೆಯ, ಎರಡನೆಯ ಮತ್ತು ಮೂರನೆಯ ಬಹುಮಾನಗಳನ್ನು ನೀಡಲು ಕಿಯೋನಿಕ್ಸ್ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಿಗೆ ಹೆಚ್ಚುವರಿ ರೂ. 85,000/– [ರೂ. ಎಂಬತ್ತೈದು ಸಾವಿರಗಳು ಮಾತ್ರ] ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮುಖಾಂತರ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2009–10ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ **"3451–00–090–2–01 ಮಾಹಿತಿ ತಂತ್ರಜ್ಞಾನ ಉನ್ನತೀಕರಣ ಮತ್ತು ಅಭಿವೃದ್ಧಿ–059–ಇತರೆ ಖರ್ಚು (ಯೋಜನೆ)"** ಇದರಡಿಯಲ್ಲಿ ಒದಗಣೆ ಮಾಡಲಾದ ಅನುದಾನದಿಂದ ಭರಿಸತಕ್ಕದ್ದು.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾಮಾಡಿ ವಿತರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರ ಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಈ ಅನುದಾನದ ಬಳಕೆಯ ಬಗ್ಗೆ ಕಿಯೋನಿಕ್ಸ್ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಿಂದ ಪಡೆದು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–5–2008ರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 2478

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ ಸರ್ಕಾರದ ಅಂತಿಮ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ನಅಇ 93 ಬೆಂರೂಪ್ರಾ 08, ದಿ: 11–03–08

2) ಶಿಕಾರಿಪುರ ಪುರಸಭೆ ಕಾರ್ಯಾಲಯದ ಪತ್ರ ಸಂಖ್ಯೆ: ಪುರಸಭೆ/ ಶಿಕಾರಿಪುರ/ಯೋ.ಪ್ರಾ/ ಮ.ಯೋ./1/09–10, ದಿ: 02–07–09

3) ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರು ಇವರ ಏಕ ಕಡತ ಸಂಖ್ಯೆ: ನಗ್ರಾಯೋ(14)/ ಶಿಕಾರಿಪುರ.ಮ.ಯೋ.ಅಂ/120/2009, ದಿ:11–09–09

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ ತಾತ್ಕಾಲಿಕ ಅನುಮೋದನೆ ನೀಡಲಾಗಿದೆ.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಶಿಕಾರಿಪುರ ಕಾರ್ಯಾಲಯವು ಶಿಕಾರಿಪುರ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಯ ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯ ಕಲಂ 13(1)ರನ್ವಯ ಅಗತ್ಯ ಕ್ರಮ ಜರುಗಿಸಿ, ಮಹಾ ಯೋಜನೆಯ ನಕ್ಷೆಗಳನ್ನು ಹಾಗೂ ವರದಿಯನ್ನು ತಯಾರಿಸಿ, ಸರ್ಕಾರದ ಅಂತಿಮ ಅನುಮೋದನೆಗೆ ನಗರ ಯೋಜನಾ ಇಲಾಖೆ ಮುಖಾಂತರ ಸಲ್ಲಿಸಲಾಗಿದೆ.

ಮೇಲೆ (3)ರಲ್ಲಿ ಓದಲಾದ ಕಡತದಲ್ಲಿ ನಗರ ಯೋಜನ ನಿರ್ದೇಶಕರು ಶಿಕಾರಿಪುರ ಪಟ್ಟಣದ ಜನಸಂಖ್ಯೆಯು 2021ರಲ್ಲಿ 60000ಗಳಿಗೆ ಬೆಳವಣಿಗೆಯಾಗುವುದಾಗಿ ಅಂದಾಜಿಸಿ, ಮಹಾಯೋಜನೆಯನ್ನು ತಯಾರಿಸಲಾಗಿದೆ. ಶಿಕಾರಿಪುರ ಸ್ಥಳೀಯ ಯೋಜನಾ ಪ್ರದೇಶದ 1912 ಹೆಕ್ಟೇರ್ ಪ್ರದೇಶದಲ್ಲಿ 570.70 ಹೆಕ್ಟೇರ್‌ಗಳನ್ನು ಅಭಿವೃದ್ಧಿಗಾಗಿ ಬೇಕಾಗುವ ಪ್ರದೇಶವೆಂದು ತೀರ್ಮಾನಿಸಿ, ಮಹಾ ಯೋಜನೆಯನ್ನು ರೂಪಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 12ರಲ್ಲಿನ ಅಂಶಗಳನ್ನು ಪರಿಗಣಿಸಿ, ಪಟ್ಟಣದ ಮುಂದಿನ ಯೋಜಿತ ಬೆಳವಣಿಗೆಗಾಗಿ ಪ್ರಸ್ತಾಪಿಸಿರುವ ಒಟ್ಟು 570.70 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 269.00 ಹೆಕ್ಟೇರ್ (ಶೇ. 47.14), ವಾಣಿಜ್ಯಕ್ಕಾಗಿ 36.90ಹೆಕ್ಟೇರ್ (ಶೇ. 6.47), ಕೈಗಾರಿಕೆಗಾಗಿ 33.63ಹೆಕ್ಟೇರ್ (ಶೇ. 5.88), ಸಾರ್ವಜನಿಕ: ಅರೆ ಸಾರ್ವಜನಿಕ ಉಪಯೋಗಕ್ಕಾಗಿ 41.00ಹೆಕ್ಟೇರ್ (ಶೇ. 7.18), ಸಾರ್ವಜನಿಕ ಉಪಯುಕ್ತತೆಗಾಗಿ 10.03 ಹೆಕ್ಟೇರ್ (ಶೇ. 1.75), ಉದ್ಯಾನವನ ಮತ್ತು ಬಯಲು ಜಾಗಗಳಿಗೆ 47.30 ಹೆಕ್ಟೇರ್ (ಶೇ. 8.30), ಸಾರಿಗೆ ಮತ್ತು ಸಂಪರ್ಕ ವಲಯಕ್ಕೆ 132.84 ಹೆಕ್ಟೇರ್ (ಶೇ. 23.28) ಪ್ರದೇಶವನ್ನು ನಿಗದಿಪಡಿಸಿ, ಮಹಾ ಯೋಜನೆಯನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದ್ದು, ಸದರಿ ಮಹಾಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ – 1961ರ ಕಲಂ 13(3)ರನ್ವಯ ಅಂತಿಮ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 274 ಬೆಂರೂಪ್ರಾ 2009, ಬೆಂಗಳೂರು, ದಿನಾಂಕ: 26ನೇ ಅಕ್ಟೋಬರ್ 2009**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ ಈ ಕೆಳಕಂಡ ಷರತ್ತಿಗೊಳಪಟ್ಟು, ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(3)ರನ್ವಯ ಅಂತಿಮ ಅನುಮೋದನೆಯನ್ನು ನೀಡಲಾಗಿದೆ. ಮಹಾ ಯೋಜನೆಗೆ ಅಂತಿಮ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

"ಮಹಾಯೋಜನೆ (ಅಂತಿಮ)ದಲ್ಲಿ ಭದ್ರಾಪುರ ಗ್ರಾಮದ ಸ.ನಂ. 145 ಹಾಗೂ ಹಲಿಯೂರು ಗ್ರಾಮದ ಸ.ನಂ.199ರ ಕೆರೆಗಳ ಮೇಲೆ ಹಾದುಹೋಗಿರುವ ವರ್ತುಲ ರಸ್ತೆಯ ಪಂಕ್ತೀಕರಣವನ್ನು ಕೆರೆಯ ಮೇಲೆ ಹಾದುಹೋಗದಂತೆ ಸೂಕ್ತವಾಗಿ ಬದಲಿಸತಕ್ಕದ್ದು"

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2479

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಬಿ. ಶಿವಶಂಕರ್, ಮುಖ್ಯ ಇಂಜಿನಿಯರ್ (ಪ್ರಸ್ತುತ ಅಮಾನತ್ತಿನಲ್ಲಿ) ಅವರ ವಿರುದ್ಧ ಲಂಚ ಪ್ರಕರಣದಲ್ಲಿ ಕ್ರಿಮಿನಲ್ ಮೊಕದ್ದಮೆ ಹೂಡಲು ಲೋಕಾಯುಕ್ತ ಪೊಲೀಸರಿಗೆ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: LOK/INV(G)/CITY/CRIME.79/2008, ದಿನಾಂಕ 26-6-2009.

**ಪ್ರಸ್ತಾವನೆ:**

ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಅವರು ಮೇಲೆ ಓದಲಾದ ದಿನಾಂಕ:26.6.2009ರ ಪತ್ರದಲ್ಲಿ ಶ್ರೀ ಬಿ. ಶಿವಶಂಕರ್, ಮುಖ್ಯ ಇಂಜಿನಿಯರ್ (ಪ್ರಸ್ತುತ ಅಮಾನತ್ತಿನಲ್ಲಿ) ಅವರು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಲ್ಲಿ ಮುಖ್ಯ ಇಂಜಿನಿಯರ್/ ಇಂಜಿನಿಯರ್ ಮೆಂಬರ್ ಆಗಿ ಕಾರ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:6.11.2008ರಂದು ಪ್ರಾಧಿಕಾರದ ಕಾಮಗಾರಿಗಳ ಗುತ್ತಿಗೆದಾರರಿಂದ ರೂ. 20.00 ಲಕ್ಷಗಳ ಅಕ್ರಮ ಸಂಭಾವನೆಯನ್ನು ಅವರ ಅಧಿಕೃತ ನಿವಾಸದಲ್ಲಿ ಪಡೆಯುತ್ತಿದ್ದಾಗ ಲೋಕಾಯುಕ್ತ ಪೋಲೀಸರಿಗೆ ಸಿಕ್ಕಿಬಿದ್ದಿದ್ದು ಈ ಬಗ್ಗೆ ನಡೆಸಿದ ತನಿಖೆಯಿಂದಾಗಿ ಅವರು ಗುತ್ತಿಗೆದಾರರಿಗೆ ಅನುಕೂಲ ಕಲ್ಪಿಸಿ ಕೊಡುವ ಸಲುವಾಗಿ ಅಕ್ರಮ ಸಂಭಾವನೆಯನ್ನು ಪಡೆದಿರುವುದು ಕಂಡುಬಂದಿರುವುದರಿಂದಲೂ, ಇದು ಲಂಚ ನಿರೋದ ಕಾಯಿದೆ 1988ರ ಕಲಂ 13(2)ರೊಡನೆ ಓದಿಕೊಂಡಂತೆ ಕಲಂ 7, 13(1)(ಡಿ)ರನ್ವಯ ಶಿಕ್ಷಾರ್ಹ ಅಪರಾಧವಾದ ಕಾರಣ ಅವರ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ

ಹೂಡಲು ಸರ್ಕಾರದ ಅನುಮತಿ ನೀಡುವಂತೆ ಕೋರಿದ್ದಾರೆ. ಅವರ ಪತ್ರದೊಡನೆ ಸಲ್ಲಿಸಲಾದ ಈ ಕೆಳಕಂಡ ಕಾಗದ ಪತ್ರಗಳನ್ನು ಪರಿಶೀಲಿಸಲಾಗಿದೆ.

1) ಪ್ರಥಮ ಮಾಹಿತಿ ವರದಿ ದಿನಾಂಕ 6–11–2008.
2) ಅಂತಿಮ ತನಿಖಾ ವರದಿ ದಿನಾಂಕ 22–6–2009.
3) ಸಾಕ್ಷಿಗಳ ಹೇಳಿಕೆಗಳು
4) ಇತರ ಮೂವರು ಆರೋಪಿತರ ಹೇಳಿಕೆಗಳು
5) ಭಾರತಿ ಏರ್‌ಟೆಲ್ ಸಂಸ್ಥೆಯಿಂದ ಪಡೆದು ಒದಗಿಸಲ್ಪಟ್ಟ ಶ್ರೀ ಬಿ. ಶಿವಶಂಕರ್ ಹಾಗೂ ರಿಜಿನಲ್ ಮ್ಯಾನೇಜರ್ ಇಸಿಸಿಐ (ಜಿ.ಎನ್. ಬಸಪ್ಪ) ಅವರ ನಡುವಣ ಮೊಬೈಲ್ ದೂರವಾಣಿ ಕುರಿತ ಪ್ರಿಂಟ್ ಔಟ್‌ಗಳು.
6) ಹಾಜರುಪಡಿಸಲ್ಪಟ್ಟ 7 ಛಾಯಾ ಚಿತ್ರಗಳು
7) ಇತರೆ ದಾಖಲೆಗಳು

ಮೇಲಿನಂತೆ ಪರಿಶೀಲಿಸಲಾಗಿ ಬೆಂಗಳೂರಿನ ಮಾಗಡಿ ರಸ್ತೆ–ವೆಸ್ಟ್ ಆಫ್ ಕಾರ್ಡ್ ರಸ್ತೆ ಜೆಂಕ್ಷನ್‌ನಲ್ಲಿ ಅಂಡರ್ ಪಾಸ್ ನಿರ್ಮಾಣ ಹಾಗೂ ಮಾಗಡಿ ರಸ್ತೆ–ಹೊರ ವರ್ತುಲ ರಸ್ತೆ ಸಂದಿಸುವಲ್ಲಿ ಗ್ರೇಡ್ ಸೆಪರೇಟರ್ ನಿರ್ಮಾಣ ಇವುಗಳಿಗೆ ಭಾಗಶಃ ಪಾವತಿ ಮಾಡಬೇಕಾದ ಒಟ್ಟು ಮೊತ್ತದ ಪೈಕಿ ರೂ. 3,18,88,732/– ಗಳನ್ನು ಪಾವತಿ ಮಾಡಲು ಅನುಮೋದನೆ ಪಡೆದ ನಂತರ ಅದರಲ್ಲಿ ಶಾಸನ ಬದ್ಧ ಮೊತ್ತವನ್ನು ಕಡಿತಗೊಳಿಸಿ ರೂ. 2,98,55,242/– ನ್ನು ದಿನಾಂಕ 3–11–2008ರಂದು ಮೆ॥ ಈಸ್ಟ್ ಕೋಸ್ಟ್ ಕನ್‌ಸ್ಟ್ರಕ್ಷನ್ ಅಂಡ್ ಇಂಡಸ್ಟ್ರೀಸ್ ಅವರಿಗೆ ಬಿಡಿಎ ವತಿಯಿಂದ ಪಾವತಿ ಮಾಡಲಾಗಿದೆ. ಇದಕ್ಕೆ ಅಂದಿನ ಬಿಡಿಎ ಇಂಜಿನಿಯರ್ ಮೆಂಬರ್ ಆದ ಶ್ರೀ ಬಿ. ಶಿವಶಂಕರ್ ಅವರು ದಿನಾಂಕ 30–10–2008ರಂದು ಶಿಪಾರಸ್ಸು ಮಾಡಿದ್ದಾರೆ. ಲೋಕಾಯುಕ್ತವು ಹಾಜರು ಪಡಿಸಿರುವ ಆರೋಪಿತರುಗಳ ಹೇಳಿಕೆ ಇವುಗಳ ಪ್ರಕಾರ ಇದಕ್ಕೆ ಸುಮಾರು 20 ದಿನಗಳ ಹಿಂದೆ ಶಿವಶಂಕರ್ ಅವರು ಎರಡೂ ಕಾಮಗಾರಿಗಳ ಸ್ಥಳ ತಪಾಸಣೆ ನಡೆಸಿದ್ದಾರೆ. ಸಹ ಆರೋಪಿಯು ಕೊಟ್ಟಿರುವ ಹೇಳಿಕೆಯ ಪ್ರಕಾರ ಆ ಸಮಯದಲ್ಲಿ ಹಣವನ್ನು ಪಾವತಿಸಲು ಅಕ್ರಮ ಸಂಭಾವನೆಯನ್ನು ಕೇಳಿದ್ದಾರೆ. ಆಗ ಉಂಟಾದ ಒಪ್ಪಂದದಂತೆ ಪಾವತಿಯಾದ 2 ದಿನಗಳ ನಂತರ 20.00 ಲಕ್ಷ ರೂ.ಗಳನ್ನು ಸಂಸ್ಥೆಯ ಮುಂದುವರೆದ ಎಲ್ಲಾ ಮೊತ್ತವನ್ನು ಇತ್ಯರ್ಥ ಪಡಿಸುವ ಭಾಗವಾಗಿ ಒಟ್ಟು ರೂ. 20.00 ಲಕ್ಷಗಳನ್ನು ಪಡೆಯಲು/ ಕೊಡಲು ಒಪ್ಪಲಾಗಿದೆ. ಇದಕ್ಕಾಗಿ ಅಗತ್ಯವಾದ ಹಣವನ್ನು ಕಾರ್ಪೋರೇಷನ್ ಬ್ಯಾಂಕ್, ಶಿವಾಜಿನಗರ ಶಾಖೆಯಿಂದ ದಿನಾಂಕ 05.11.2008 ಹಾಗೂ 06.11.2008ರಂದು ಸೆಲ್ಫ್ ಚೆಕ್ ಮೂಲಕ ಡ್ರಾ ಮಾಡಲಾಗಿದೆ. ಈ ಹಂತದಲ್ಲಿ ಲೋಕಾಯುಕ್ತ ಡಿವೈಎಸ್‌ಪಿ ಅವರಿಗೆ ಅಕ್ರಮ ಸಂಭಾವನೆ ಕೊಡುವ/ಕೊಳ್ಳುವ ಕುರಿತು ಮಾಹಿತಿ ಲಭ್ಯವಾಗಿದೆ. ಆರೋಪಿಯ ಮನೆಯ ವಿಳಾಸವು ದೊರೆತಿದೆ. ಅದರ ಆಧಾರದ ಮೇಲೆ ಡಿವೈಎಸ್‌ಪಿ ಅವರು, ಭೂದಾಖಲೆಗಳ ಸಹಾಯಕ ನಿರ್ದೇಶಕರು, ಕೆ.ಆರ್.ಸರ್ಕಲ್ ಅವರಿಗೆ ಪತ್ರ ಬರೆದು ಅವರ ಕಛೇರಿಯ ಪ್ರಥಮ ದರ್ಜೆ ಸಹಾಯಕರುಗಳಾದ ಶ್ರೀ ಮಹಮದ್ ಅತಾವುಲ್ಲಾ ಹಾಗೂ ಹೆಚ್.ಆರ್. ಕುಮಾರಸ್ವಾಮಿ, ಅವರುಗಳನ್ನು ಕಳುಹಿಸಿಕೊಟ್ಟ ಮೇರೆಗೆ ಪೂರ್ವ ಕಾರ್ಯಗಳನ್ನು ಜರುಗಿಸಿದ್ದಾರೆ ಹಾಗೂ ಬೆಂಗಳೂರು ಗ್ರಾಮಾಂತರ ಡಿವೈಎಸ್‌ಪಿ ಅವರ ನೆರವನ್ನು ಪಡೆದು 2 ಸರ್ಕಾರಿ ವಾಹನಗಳಲ್ಲಿ ಅಪರಾಹ್ನ 1.30ಕ್ಕೆ ಲೋಕಾಯುಕ್ತ ಕಛೇರಿ ಬಿಟ್ಟು ಶ್ರೀ ಬಿ. ಶಿವಶಂಕರ್, ಇಂಜಿನಿಯರ್ ಸದಸ್ಯರು ಅವರ ಮನೆ ಸಂಖ್ಯೆ: 73, 5ನೇ ಕ್ರಾಸ್, 3ನೇ ಮೈನ್, ಆರ್.ಎಂ.ವಿ. 2ನೇ ಹಂತ, ಬೆಂಗಳೂರು ಇಲ್ಲಿಗೆ ತಲುಪಿ, ಅಯಕಟ್ಟಿನ ಜಾಗಗಳಲ್ಲಿ ಗುಟ್ಟಾಗಿ ಪಹರೆ ನಿಂತಿದ್ದಾರೆ.

ಸುಮಾರು ಮಧ್ಯಾಹ್ನ 3.15ಕ್ಕೆ ಬಿಡಿಎಗೆ ಸೇರಿದ ಕೆಎ–04–ಎಂಸಿ–7291, ರಿಜಿಸ್ಟ್ರೇಷನ್‌ನ ಕಾರ್ ಸದರಿ ಮನೆಯ ಮುಂದೆ ಬಂದು ಅದರಿಂದ ಒಬ್ಬ ವ್ಯಕ್ತಿ ಮನೆಯ ಒಳಗೆ ಪ್ರವೇಶಿಸುತ್ತಾರೆ. ಇದಾದ ತುಸು ಹೊತ್ತಿಗೆ ಟಿಎನ್ 01–ಎಬಿ–3686 ಎಂಬ ತಮಿಳುನಾಡು ರಿಜಿಸ್ಟ್ರೇಷನ್ ಹೊಂದಿದ ಟಯೋಟಾ ಕೊರೋಲಾ ಕಾರಿನಲ್ಲಿ 3 ವ್ಯಕ್ತಿಗಳು ಬಂದು, ಮನೆಯ ಒಳಗೆ ಹೋಗುತ್ತಾರೆ. ಅವರ ಪೈಕಿ ಒಬ್ಬರು ಬಿಳಿ ಬಣ್ಣದ ಪ್ಲಾಸ್ಟಿಕ್ ಕ್ಯಾರಿಬ್ಯಾಗ್ ಹಿಡಿದಿರುತ್ತಾರೆ. ಕಾರು ಮುಂದೆ ಹೋಗಿ ಮರೆಯಲ್ಲಿ ನಿಲ್ಲುತ್ತದೆ.

ಟಯೋಟಾ ಕಾರಿನಲ್ಲಿ ಬಂದು ಮನೆಯ ಒಳಗೆ ಹೋಗಿದ್ದ 3 ಮಂದಿ ಸುಮಾರು ಮದ್ಯಾಹ್ನ 3–35ಕ್ಕೆ ಹೊರಬಂದು ಕಾರಿಗಾಗಿ ಹುಡುಕುತ್ತಾರೆ. ಆಗ ತನಿಖಾಧಿಕಾರಿಯು ಅವರನ್ನು ತಡೆದು ತನಿಖಾ ತಂಡದ ಸದಸ್ಯರೊಡನೆ ಅರ್ಧ ಬಾಗಿಲು ತೆರೆದ ಮನೆಯ ಒಳಗಡೆ ಕರೆದುಕೊಂಡು ಹೋಗುತ್ತಾರೆ. ಸದರಿ ಹಜಾರದಲ್ಲಿ ಸೋಪಸೆಟ್ ಸಿಂಗಲ್ ಸೀಟ್ ನಲ್ಲಿ ಕುಳಿತ ವ್ಯಕ್ತಿಯು ಹಣದ ಕಟ್ಟುಗಳನ್ನು ಎಣಿಸುತ್ತಿದ್ದು, ಅಪರಿಚಿತರನ್ನು ಕಂಡ ತಕ್ಷಣ ಸದರಿ ನೋಟುಗಳನ್ನು ತನ್ನ ಪಕ್ಕದಲ್ಲಿದ್ದ 2 ಕಂಪಾರ್ಟ್‌ಮೆಂಟಿನ ಟೀಪಾಯಿನ ಮೇಲ್ಭಾಗದಲ್ಲಿ ಪ್ಲಾಸ್ಟಿಕ್ ಕ್ಯಾರಿಬ್ಯಾಗ್ ಮೇಲೆ ಇಡುತ್ತಾರೆ (ಇದನ್ನು ತನಿಖಾಧಿಕಾರಿಯಿಂದ ಹಾಜರು ಪಡಿಸಲ್ಪಟ್ಟ 3 ರಿಂದ 7ರವರೆಗಿನ ಛಾಯಚಿತ್ರಗಳಿಂದ ದೃಢೀಕರಿಸಿಕೊಳ್ಳಲಾಗಿದೆ).

ತನಿಖಾಧಿಕಾರಿಯು ತನ್ನ ಗುರುತು ತಿಳಿಸಿ, ಖಚಿತ ವರ್ತಮಾನದ ಮೇಲೆ ಬಂದ ಹಾಗೂ ಆನಂತರದ ವಿದ್ಯಮಾನಗಳನ್ನು ತಿಳಿಸಿದಾಗ ಸದರ ವ್ಯಕ್ತಿಯು ತನ್ನನ್ನು ಬಿ. ಶಿವಶಂಕರ್, ಮುಖ್ಯ ಇಂಜಿನಿಯರ್ (ಇಂಜಿನಿಯರ್ ಮೆಂಬರ್)

ಬಿಡಿಎ ಎಂದು ಗುರುತಿಸಿ ಕೊಳ್ಳುತ್ತಾರೆ ಹಾಗೂ ಸದರಿ ಹಣವನ್ನು ಲೋಕಾಯುಕ್ತ ಪೊಲೀಸರು ಕರೆತಂದಿರುವ ಮೂವರು ವ್ಯಕ್ತಿಗಳು ಕೊಟ್ಟಿದ್ದಾರೆ ಎಂದು ದೃಢೀಕರಿಸಿದ್ದಾರೆ ಸದರಿ ಮೂವರು ವ್ಯಕ್ತಿಗಳು ತಾವು ಸದರಿ ಮೊತ್ತವನ್ನು ಶ್ರೀ ಶಿವಶಂಕರ್ ಅವರಿಗೆ ಕೊಟ್ಟಿರುವುದಾಗಿ ಒಪ್ಪಿಕೊಂಡು ಅವರ ಗುರುತನ್ನು ಈ ಕೆಳಕಂಡಂತೆ ನೀಡುತ್ತಾರೆ.

1. ಎಸ್.ಎ ಮಹ್ಮದ್ ಮೊಹಿದ್ದೀನ್ ಬಿನ್ ಎ.ಕೆ. ಶೇಖ್, ನಿರ್ದೇಶಕರು, ಇಸಿಸಿಐ, ಚೆನ್ನೈ.
2. ಇಲಿಯಾಸ್ ಎ ಲತೀಫ್ ಬಿನ್ ಲೇಟ್ ಎಂ.ಎ. ಲತೀಫ್, ಜನರಲ್ ಮ್ಯಾನೇಜರ್, ಇಸಿಸಿಐ ಚೆನ್ನೈ.
3. ಜಿ.ಎನ್. ಬಸಪ್ಪ, ರಿಜಿನಲ್ ಮ್ಯಾನೇಜರ್, ಇಸಿಸಿಐ, ಬೆಂಗಳೂರು.

ಮೇಲಿನ ಮಾಹಿತಿಯ ನಂತರ ಟಿಪಾಯಿ ಮೇಲಿದ್ದ ಹಣವನ್ನು ತನಿಖಾಧಿಕಾರಿಯು ಪರಿಶೀಲಿಸಿ ನೊಡಲಾಗಿ, ರೂ.1000/– ಮುಖ ಬೆಲೆಯ 20 ಬಂಡಲುಗಳು ಇರುತ್ತವೆ. ಸದರಿ ನೋಟುಗಳ ಬಂಡಲ್‌ಗಳ ಮೇಲೆ ಯಾವುದೇ ಬ್ಯಾಂಕಿನ ಸೀಲುಗಳು ಇರುವುದಿಲ್ಲ. (ಆದರೆ ಕಾರ್ಪೋರೇಷನ್ ಬ್ಯಾಂಕಿನ ಶಿವಾಜಿನಗರ ಶಾಖೆಯ ಮ್ಯಾನೇಜರ್ ಅವರು ದಿನಾಂಕ:26.2.2009ರಂದು ನೀಡಿದ ದೃಢೀಕೃತ ಲೆಡ್ಜರ್ ವಿವರಗಳಲ್ಲಿ 3 ಸೆಲ್ಫ್ ಚೆಕ್‌ಗಳ ಮೂಲಕ 5 ಮತ್ತು 6ನೇ ನವೆಂಬರ್ 2008ರಂದು 15ಲಕ್ಷ+16ಲಕ್ಷ+10ಲಕ್ಷ ಈಗೆ ಒಟ್ಟು 40 ಲಕ್ಷ ರೂ.ಗಳನ್ನು ಇಸಿಸಿಐ ಕಂಪನಿಯು ಡ್ರಾ ಮಾಡಿರುವುದು ಕಂಡುಬಂದಿದೆ).

ತನಿಖಾಧಿಕಾರಿಯು ಹಾಜರು ಪಡಿಸಿದ ಮತ್ತೊಂದು ದಾಖಲೆಯು ಇಸಿಸಿಐ ರಿಜಿನಲ್ ಮ್ಯಾನೇಜರ್ (ಮೊಬೈಲ್ ನಂ. 9980547564) ಹಾಗೂ ಆರೋಪಿ ಬಿ. ಶಿವಶಂಕರ್, (9845630117) ಅವರ ನಡುವೆ ದಿನಾಂಕ 6–11–2008ರಂದು ಮದ್ಯಾಹ್ನ 2 ಗಂಟೆ 44 ನಿಮಿಷ ಹಾಗೂ 3 ಗಂಟೆ 7 ನಿಮಿಷಗಳಲ್ಲಿ ನಡೆದ ಮೊಬೈಲ್ ದೂರವಾಣಿ ಕರೆಯ ಪ್ರಿಂಟ್ ಔಟ್ ಆಗಿದೆ. ಈ ದೂರವಾಣಿ ಕರೆಯು ಮಾಡಲ್ಪಟ್ಟ ಸ್ವಲ್ಪ ಸಮಯದಲ್ಲೆ 20ಲಕ್ಷ ರೂ.ಗಳ ಹಸ್ತಾಂತರ ಉಂಟಾಗಿದೆ. ಇದನ್ನೂ ಸಹ ಒಂದು ದಾಖಲೆಯನ್ನಾಗಿ ಪರಿಗಣಿಸಿದೆ. ಸದರಿ ಹಾಲ್‌ನ ಪೂರ್ವದ ದಿಕ್ಕಿಗಿರುವ ಬೆಡ್ ರೂಂನ ವಾರ್ಡ್ ರೋಬ್‌ನಲ್ಲಿ ಆರೋಪಿಯು ಲೆಕ್ಕ ಕೊಡಲು ವಿಫಲರಾದ ರೂ. 1,69,500ಗಳು ದೊರೆತಿವೆ.

ಮಾಗಡಿ ರಸ್ತೆ–ಕಾರ್ಡ್ ರಸ್ತೆಯ ಅಂಡರ್ ಪಾಸ್ ಹಾಗೂ ಮಾಗಡಿ ರಸ್ತೆ – ಹೊರ ವರ್ತುಲ ರಸ್ತೆ ಗ್ರೇಡ್ ಸೆಪರೇಟರ್ ನಿರ್ಮಾಣಕ್ಕೆ ಸಂಬಂಧಪಟ್ಟ ಬಿಡಿಎ ಹಾಗೂ ಇಸಿಸಿಐ ನಡುವಣ ಒಪ್ಪಂದದ ಪ್ರತಿ, 20 ಲಕ್ಷ ರೂ. ಅಕ್ರಮ ಸಂಭಾವನೆ ಕೊಡು–ಕೊಳ್ಳುವಿಕೆಗೆ ಮೂಲವಾದ ಪ್ರಶ್ನಿತ 2,98 ಕೋಟಿ ರೂ. ಬಿಡುಗಡೆಗೆ ಸಂಬಂಧಪಟ್ಟ ದಾಖಲೆಗಳನ್ನು ತನಿಖಾಧಿಕಾರಿಯವರು ಬಿಡಿಎ ಇಂದು ಪಡೆದು ಪರಿಶೀಲಿಸಿದ್ದಾರೆ ಹಾಗೂ ಇವುಗಳಿಗೆ ಸಂಬಂಧಪಟ್ಟಂತೆ, ಬಿಡಿಎ ಅಧಿಕಾರಿಗಳ ಹೇಳಿಕೆಗಳನ್ನು ಸಹ ಪಡೆದಿದ್ದಾರೆ. ಮಹಜರ್ ಸಾಕ್ಷಿಗಳ ಹೇಳಿಕೆಗಳು ತನಿಕೆಗೆ ಸಹಕರಿಸಿದ ಪೊಲೀಸು ಅಧಿಕಾರಿ ಸಿಬ್ಬಂದಿಯ ಹೇಳಿಕೆಗಳು ಬಿ. ಶಿವಶಂಕರ್ ಅವರಿಗೆ ದಿನಾಂಕ 6–11–2008ರಂದು 20,00 ಲಕ್ಷ ರೂ.ಗಳ ಅಕ್ರಮ ಸಂಭಾವನೆ ನೀಡಿ ಸಿಕ್ಕಿಬಿದ್ದ ಇಸಿಸಿಐ ಸಂಸ್ಥೆಯ ಅಧಿಕಾರಿಗಳಾದ ಎಸ್.ಎ. ಮಹ್ಮದ್ ಮೊಹಿದ್ದೀನ್, ಎ. ಲತೀಫ್ ಮತ್ತು ಬಿ.ಎನ್. ಬಸಪ್ಪ, ರಿಜಿನಲ್ ಮ್ಯಾನೇಜರ್, ಇಸಿಸಿಐ, ಬೆಂಗಳೂರು ಇವರುಗಳ ಹೇಳಿಕೆಗಳು ಬಹುಮಟ್ಟಿಗೆ ಒಂದೇ ಆಗಿರುತ್ತವೆ.

ಇದಕ್ಕೆ ವ್ಯತಿರಿಕ್ತವಾಗಿ ಬಿ. ಶಿವಶಂಕರ್ ಅವರು ದಿನಾಂಕ 20–8–2009ರಲ್ಲಿ ಮನವಿ ಸಲ್ಲಿಸಿ, ಸದರಿ ಪ್ರಕರಣವನ್ನು ಎಫ್.ಐ.ಆರ್. ಇಲ್ಲದೆ ಮುಂದುವರಿಸಲಾಗಿದ್ದು, ಇದು ಅಕ್ರಮವೆಂದು ತಿಳಿಸಿದ್ದಾರೆ. ಆದರೆ ಈ ಪ್ರಕರಣದಲ್ಲಿ ಎಫ್.ಐ.ಆರ್. ಇದೆ ಹಾಗೂ ಅದು ಕಡತದಲ್ಲಿ ಲಭ್ಯವಿದೆ. ನಾನು ಅಕ್ರಮ ಸಂಬಾವನೆಯನ್ನು ಕೇಳಿದ್ದೇನೆಂದು ಯಾರು ಸಹ ದೂರು ಸಲ್ಲಿಸಿರುವುದಿಲ್ಲ ಇವೆಲ್ಲವು ತನಿಖಾಧಿಕಾರಿಯ ಊಹೆ ಆಗಿವೆ ಎಂಬ ವಾದವನ್ನು ಮುಂದಿಟ್ಟಿದ್ದಾರೆ. ಇದನ್ನು ನಂಬಲು ಸಾಧ್ಯವಾಗುವುದಿಲ್ಲ. ನಂಬಲರ್ಹ ಮೂಲಗಳಿಂದ ಮಾಹಿತಿಯು ದಿನಾಂಕ 6–11–2008ರಲ್ಲಿ ಬೆಳಗ್ಗೆ 10–15ಕ್ಕೆ ತನಿಖಾಧಿಕಾರಿಗೆ ದೊರೆತಿದೆ. ಆನಂತರ ಪ್ರಾರಂಭಿಕ ಪ್ರಕ್ರಿಯೆಗಳು ಕೈಗೊಳ್ಳಲ್ಪಟ್ಟು ಅಂತಿಮವಾಗಿ ಮದ್ಯಾಹ್ನ 3–35ಕ್ಕೆ ಅಕ್ರಮ ಸಂಭಾವನೆ ಪಡೆದಿರುವುದನ್ನು ಪತ್ತೆ ಹಚ್ಚಲಾಗಿದೆ. ಆರೋಪಿಯು ಅಲ್ಲಿಯೇ ಸಿಕ್ಕಿಬಿದ್ದಿದ್ದಾರೆ. ಹಣವನ್ನೂ ಸಹ ತನಿಖಾಧಿಕಾರಿಯು ವಶಪಡಿಸಿಕೊಂಡಿದ್ದಾರೆ. ಕೇವಲ ಊಹೆಯ ಮೇಲೆ ಟ್ರಾಪ್ ಪಕ್ರಿಯೆ ನಡೆದಿದ್ದಲ್ಲಿ ಕರಾರುವಾಕ್ಕಾಗಿ ಆರೋಪಿಯ ಮನೆ ತಲುಪುವುದು, ನಿಗಧಿತ ಅವಧಿಗೆ ಎಲ್ಲವೂ ಸಂಭವಿಸುವುದು, ಇವುಗಳು ನಡೆಯುವುದು ಸಾಧ್ಯವಾಗುತ್ತಿರಲಿಲ್ಲ ಹಾಗೂ ಆರೋಪಿಗಳನ್ನು ಹಿಡಿಯುವುದು ಸಾಧ್ಯವಾಗುತ್ತಿರಲಿಲ್ಲ. ಆದ್ದರಿಂದ ಈ ಎಲ್ಲ ಪ್ರಕ್ರಿಯೆಯು ಕರಾರುವಾಕ್ಕಾಗಿಯೇ ಖಚಿತ ಮಾಹಿತಿ ಮೇಲೆ ನಡೆದಿದೆ ಎಂದು ನಂಬಲು ಯಾವುದೇ ಅಡ್ಡಿಯಿಲ್ಲ. ತನಿಖಾಧಿಕಾರಿಯು, ಸಂಸ್ಥೆಗೆ ನಾನು ಅಧಿಕೃತವಾಗಿ ಸಹಾಯ ಮಾಡಲು ಲಂಚ ಪಡೆದಿದ್ದೇನೆಂದು ಬಿಂಬಿಸಿದ್ದಾರೆ. ಗುತ್ತಿಗೆಯನ್ನು ಇಸಿಸಿಐ ಸಂಸ್ಥೆಗೆ ಬಹಳ ಹಿಂದೆಯೇ ನೀಡಲಾಗಿತ್ತು. ತಮ್ಮ ಪಾತ್ರವೇನು ಇಲ್ಲ ತನಿಖಾಧಿಕಾರಿಯು ಸಂಶಯಾಸ್ಪದ ಹಾಗೂ ಸಂಭವನೀಯ ಬೆಳವಣಿಗೆಗಳನ್ನು ತಮ್ಮ ತಲೆಗೆ ಕಟ್ಟುತ್ತಿದ್ದಾರೆ ಎಂದು ಶ್ರೀ ಬಿ. ಶಿವಶಂಕರ್ ವಾದಿಸಿದ್ದಾರೆ. ಆದರೆ ಒಟ್ಟು ಮೊತ್ತದಲ್ಲಿ ಕೇವಲ 2,98 ಕೋಟಿ ರೂ. ಗಳನ್ನು ಆರೋಪಿಯ ಶಿಫಾರಸ್ಸಿನ ಮೇಲೆ ಬಿಡಿಎ ಬಿಡುಗಡೆ ಮಾಡಿರುವುದು, ಉಳಿದ ಹನ ಬಿಡುಗಡೆ ಮಾಡಬೇಕಾದ ಸಂದರ್ಭಗಳು ಉಂಟಾಗುವುದು ಇವೆಲ್ಲವೂ ಸಕರಾತ್ಮಕವಾಗಿವೆ. ಮೇಲಾಗಿ, ಪ್ರಕರಣದ 4ನೇ ಆರೋಪಿ ಜಿ.ಎನ್. ಬಸಪ್ಪ, ರಿಜಿನಲ್ ಮ್ಯಾನೇಜರ್, ಇಸಿಸಿಐ, ಬೆಂಗಳೂರು ಅವರು ದಿನಾಂಕ 6–11–2008ರ ತಮ್ಮ ಹೇಳಿಕೆಯಲ್ಲಿ ಆರೋಪಿಯು ಅಂದಿಗೆ 20

ದಿನಗಳ ಹಿಂದೆ 2 ಕಾಮಗಾರಿಗಳನ್ನು ಸ್ಥಳ ತಪಾಸಣೆ ಮಾಡಿ, ಪೂರ್ಣಗೊಂಡ ಕಾಮಗಾರಿಗೆ ಹಣ ಬಿಡುಗಡೆ ಮಾಡಲು ಹಾಗೂ ಮುಂದೆ ಹಣ ಬಿಡುಗಡೆ ಮಾಡುವ ಕೆಲಸ ಸುಗಮವಾಗಿ ಅಗಲು ಸಹಕರಿಸುವ ಸಲುವಾಗಿ 20 ಲಕ್ಷ ರೂ.ಗಳನ್ನು ಬೇಡಿದ್ದು, ಅದನ್ನು ಕೊಡಲು ತಾವು ಒಪ್ಪಿದ್ದಾಗಿ ತಿಳಿಸಿದ್ದಾರೆ. ಆದ್ದರಿಂದ ಶ್ರೀ ಬಿ. ಶಿವಶಂಕರ್ ಅವರ ವಾದವನ್ನು ಒಪ್ಪಲು ಸಾಧ್ಯವಾಗುವುದಿಲ್ಲ.

ತಮ್ಮ ವಿರುದ್ಧ ಆರೋಪವನ್ನು 8 ಮಂದಿ ಪೊಲೀಸರು ಒಳಗೊಂಡಂತೆ 13 ಮಂದಿಯ ಸಾಕ್ಷಿಗಳಿಂದ ಸಾಭೀತು ಪಡಿಸಲು ತನಿಖಾಧಿಕಾರಿಗಳು ಹೊರಟಿದ್ದು, ಅದರಲ್ಲಿ ಮೂವರು ತಮ್ಮೊಡನೆ ಅರೋಪಿಗಳಾಗಿರುವುದರಿಂದ ಇದಕ್ಕೆ ಯಾವುದೇ ಕಾನೂನಿನ ಬೆಂಬಲವಿರುವುದಿಲ್ಲವೆಂದು ಶ್ರೀ ಬಿ. ಶಿವಶಂಕರ್ ವಾದಿಸಿದ್ದಾರೆ. ಆದರೆ ಈ ಮೂರು ಮಂದಿ ಸಹ ಆರೋಪಿಗಳು ಆರೋಪಿಯ ಮನೆಯಿಂದ ಹೊರ ಬರುವಾಗ ಲೋಕಾಯುಕ್ತ ಪೊಲೀಸರಿಗೆ ಸಿಕ್ಕಿಬಿದ್ದವರಾಗಿರುತ್ತಾರೆ. ಇದಕ್ಕೆ ಮುಂಚೆ ಅವರೇ ಒಳಗೆ ಹೋಗಿದ್ದರು ಹಾಗೂ ಅವರಲ್ಲಿ ಒಬ್ಬರು ಬಿಳಿ ಬಣ್ಣದ ಪ್ಲಾಸ್ಟಿಕ್ ಕ್ಯಾರಿ ಬ್ಯಾಗ್ ಹಿಡಿದಿದ್ದರು, ಹೊರಗೆ ಬಂದಾಗ ಯಾರ ಕೈಯಲ್ಲೂ ಕ್ಯಾರಿಬ್ಯಾಗ್ ಇರಲಿಲ್ಲ, ಮನೆಯ ಒಳಗಿನ ಹಾಲ್‌ನ ಟಿಪಾಯಿ ಮೇಲೆ ಜೋಡಿಸಿಟ್ಟ ನೋಟುಗಳ ಕಟ್ಟುಗಳ ಕೆಳಗೆ ಸದರಿ ಪ್ಲಾಸ್ಟಿಕ್ ಕ್ಯಾರಿಬ್ಯಾಗ್ ಇದ್ದದ್ದು ಕಂಡುಬಂದಿದೆ. ಆದ್ದರಿಂದ ಇದನ್ನು ಕೇವಲ ಸಾಕ್ಷಿಗಳ ಹೇಳಿಕೆ ಆಧಾರದ ಮೇಲೆ ಆರೋಪ ಸಾಬೀತು ಪಡಿಸಲು ಪ್ರಯತ್ನಿಸಲಾಗುತ್ತಿದೆ ಎಂಬ ವಾದವನ್ನು ನಂಬಲಾಗುವುದಿಲ್ಲ.

ಅಂಡರ್ ಪಾಸ್, ಗ್ರೇಡ್ ಸಪರೇಟರ್, ಇವುಗಳ ನಿರ್ಮಾಣಕ್ಕಾಗಿ ಇಸಿಸಿಐ ಒಡನೆ ಸ್ಪರ್ಧಿಸಿ ಗುತ್ತಿಗೆ ಪಡೆಯಲು ವಿಫಲವಾದ ಇತರ ಸಂಸ್ಥೆಗಳು ಬಲಿಪಶು ಮಾಡಲು ಸಂಚು ಹೂಡಿದ್ದು, ಅದಕ್ಕೆ ಬಲಿಯಾಗಿದ್ದೇನೆಂದು ಶ್ರೀ ಬಿ. ಶಿವಶಂಕರ್ ಅವರು ವಾದಿಸಿದ್ದಾರೆ. ಆದರೆ ಪ್ರಕರಣದ ಸಂದರ್ಭ ಸನ್ನಿವೇಶಗಳು ಈ ರೀತಿ ಇಲ್ಲ. ಆರೋಪಿಯು ಮನೆಗೆ ಬರುವುದು, ಅದಾದ 5 ನಿಮಿಷಗಳಲ್ಲೇ ಉಳಿದವರು ಮನೆಗೆ ಬರುವುದು, ಅವರುಗಳು ಒಳ ಹೋದಾಗ ಕ್ಯಾರಿ ಬ್ಯಾಗ್ ಇರುವುದು, ಹೊರ ಬಂದಾಗ ಅದಿಲ್ಲದಿರುವುದು, ಆರೋಪಿಯ ಮನೆಯೊಳಗೆ ಕ್ಯಾರಿ ಬ್ಯಾಗ್ ಹಣ ಎಲ್ಲಾ ದೊರೆಯುವುದು, ಇವೆಲ್ಲವೂ ಸಂಚುಗಳೆಂದು ಪರಿಗಣಿಸಲು ಸಾಧ್ಯವಾಗದ ವಿದ್ಯಮಾನಗಳಾಗಿವೆ.

ಉಳಿದಂತೆ ಆರೋಪಿಯು ಲೋಕಾಯುಕ್ತ ಪೊಲೀಸರ ಮೇಲೆ ಕೆಲವು ಆರೋಪಗಳನ್ನು ಮಾಡಿದ್ದು, ಅವು ಯಾವುವು ಪರಿಶೀಲನಾರ್ಹ ಅಲ್ಲ. ಲೋಕಾಯಕ್ತ ಡಿ.ವೈ.ಎಸ್.ಪಿ. ಅವರ ತನಿಖಾ ವರದಿ, ಅದಕ್ಕೆ ಲಗತ್ತಿಸಿದ ದಾಖಲೆಗಳ ಪ್ರತಿ, ಅನಂತರ ಹಾಜರು ಪಡಿಸಲಾದ ಜರಾಕ್ಸ್ ಪ್ರತಿ ಇವೆಲ್ಲವುಗಳನ್ನು ಪರಿಶೀಲಿಸಲಾಗಿ ಅಭಿಯೋಗ ಜರುಗಿಸಲು ಲೋಕಾಯುಕ್ತಕ್ಕೆ ಅನುಮತಿ ನೀಡಲು ಇದೊಂದು ಅರ್ಹ ಪ್ರಕರಣವಾಗಿದೆ ಎಂಬುದು ಸ್ಪಷ್ಟವಾಗಿ ಗೋಚರಿಸುತ್ತದೆ. ಈ ಎಲ್ಲಾ ಅಂಶಗಳಿಂದಾಗಿ ಈ ಪ್ರಕರಣದಲ್ಲಿ ಶ್ರೀ ಬಿ. ಶಿವಶಂಕರ್, ಮುಖ್ಯ ಇಂಜಿನಿಯರ್ ಅವರ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ ಹೂಡಲು ಲೋಕಾಯುಕ್ತ ಪೋಲೀಸರಿಗೆ ಅನುಮತಿಸಲು ತೀರ್ಮಾನಿಸಿ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 27 ಇಮುವಿ 2008, ಬೆಂಗಳೂರು, ದಿನಾಂಕ: 4ನೇ ನವೆಂಬರ್ 2009.**

ಭ್ರಷ್ಟಾಚಾರ ನಿರ್ಮೂಲನಾ ಕಾಯಿದೆ 1988ರ ಸೆಕ್ಷನ್ 19(1)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಬಿ. ಶಿವಶಂಕರ್, ಮುಖ್ಯ ಇಂಜಿನಿಯರ್ (ಪ್ರಸ್ತುತ ಅಮಾನತ್ತಿನಲ್ಲಿ) ಅವರ ವಿರುದ್ಧ ಅದೇ ಕಾಯಿದೆಯ 13(2)ರೊಡನೆ ಓದಿಕೊಂಡಂತೆ ಕಲಂ 7, 13(1)(ಡಿ)ರನ್ವಯ ಶಿಕ್ಷಾರ್ಹ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ ಹೂಡಲು ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಅನುಮತಿ ನೀಡುತ್ತದೆ.

ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಾವಳಿ 1977ರ ನಿಯಮ 18ರಲ್ಲಿ ನಿಗಧಿಪಡಿಸಿರುವಂತೆ ಸರ್ಕಾರದ ಪರವಾಗಿ ಅಥವಾ ಸರ್ಕಾರದಿಂದ ಹೊರಡಿಸಲಾದ ಎಲ್ಲಾ ಆದೇಶಗಳನ್ನು ಅಥವಾ ಲೇಖಗಳನ್ನು ಕರ್ನಾಟಕ ರಾಜ್ಯಪಾಲರ ಹೆಸರಿನಲ್ಲಿ ಹೊರಡಿಸಬೇಕು ಅಥವಾ ಹೊರಡಿಸುವಂತೆ ಮಾಡಬೇಕು. ಅದೇ ನಿಯಮಾವಳಿಯ ನಿಯಮ 19(1)ರಲ್ಲಿ ನಿಗಧಿ ಪಡಿಸಿರುವಂತೆ ಕರ್ನಾಟಕ ರಾಜ್ಯಪಾಲರ ಹೆಸರಿನಲ್ಲಿ ಹೊರಡಿಸಲಾಗುವ ಆದೇಶಗಳು ಮತ್ತು ಲೇಖಗಳು ಒಬ್ಬ ಅಧೀನ ಕಾರ್ಯದರ್ಶಿಯ ಸಹಿಯಿಂದ ಅಧಿಕೃತಗೊಳ್ಳಬೇಕು.

ಆದ್ದರಿಂದ ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಾವಳಿ 1977ರನ್ವಯ ಈ ಆದೇಶವನ್ನು ನನ್ನ ಮೊಹರು ಮತ್ತು ಸಹಿಯ ಅಡಿಯಲ್ಲಿ ದಿನಾಂಕ 4ನೇ ನವೆಂಬರ್ 2009ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 2480

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

## SOCIAL WELFARE SECRETARIAT

**Sub:** Extending Government Guarantee in favour of National Backward Classes Finance & Development Corporation (NBCFDC), New Delhi for the loans to be raised by D. Devaraj Urs Backward Classes Development Corporation Ltd.

**Read:** 1) Single file No. DBCDC/Accts/NBCFDC/Guarantee/2009-10 dated 18-6-09 of Managing Director, D. Devaraj Urs Backward Classes Development Corporation Ltd.

2) Letter No. NBCFDC/PROJ/30/NOT/ALL/2009/5758 dated 26-3-09 from the National Backward Classes Finance & Development Corporation, New Delhi.

3) Proceedings of the cabinet meeting held on 11-10-2009

**Preamble:**

D. Devaraj Urs Backward Classes Development Corporation, Bangalore is established for the socio-economic upliftment of Backward classes in the state. The Corporation is implementing Loan schemes, Job Oriented Training, Gangakalyana Irrigation Schemes out of the funds allotted by the Government in the Budget in the form of share capital and grant-in-aid by the State Government in Budget.

Government of India has established National Backward Classes Finance & Development Corporation (NBCFDC) during 1992 for the socio-economic upliftment of Backward classes in the country. NBCFDC is releasing funds through its State Channelising Agencies. D. Devaraj Urs Backward Classes Development Corporation is one of the State Channelising Agencies of NBCFDC, New Delhi and has been implementing various loans schemes of NBCFDC for the self employment of the Backward Classes in the State. NBCFDC releases 85% of project cost as loan through DBCDC to the Backward Classes beneficiaries, 10% of the project cost is being released by DBCDC and the remaining 5% will be beneficiary's contribution. NBCFDC charges 1% to 3% interest per annum on the loan advances to DBCDC and DBCDC is charging 4% to 6% interest per annum on the loan disbursed to beneficiaries.

As per norms of NBCFDC, the State Government has to extend Government Guarantee in favour of NBCFDC to draw loan. So far, the government of Karnataka has extended Government Guarantee to the tune of Rs. 118.00 crore to NBCFDC. As against this, DBCDC has availed loan of Rs. 163.02 crore from NBCFDC. DBCDC has extended loan of Rs. 163.02 crore to 116541 beneficiaries in the State.

NBCFDC has allocated Rs. 20.00 crore to DBCDC for the following schemes.

(Rs. In lakhs)

| Sl. No. | Name of the Scheme | Physical | Financial |
|---|---|---|---|
| 1 | Agriculture & Allied Activities | 376 | 100 |
| 2 | Small Business/Artisan/ Traditional Occupation | 184 | 50 |
| 3 | Service Sector | 312 | 50 |
| 4 | Transport Sector | 116 | 100 |
| 5 | New Swarnima Scheme | 8930 | - |
| 6 | Education Loan Scheme | 60 | 30 |
| 7 | Swayam Saksham Scheme | 75 | 20 |
| 8 | Micro Finance Scheme | 3132 | 600 |
| 9 | Mahila Samridi Scheme | 301 | 50 |
| | **TOTAL** | **13486** | **2000.00** |

The Managing Director, DBCDC has requested the Government to extend Government Guarantee of Rs. 20.00 crore in favour of NBCFDC, to disbursed loans to 13486 beneficiaries belonging to backward classes in the State. Hence this Order:

**Government Order No. SWD 224 BMs 2009, Bangalore, Dated: 28th October 2009**

After due examination of the proposal of the Managing Director, D. Devaraj Urs Backward Classes Development Corporation, Govt. are pleased to extend Government Guarantee to the extent of Rs. 20.00 crore (Rupees Twenty crore only) in favour of National Backward Classes Finance Development Corporation, New Delhi so as to enable D. Devaraj Urs Backward Classes Development Corporation to secure loan for implementing Term loar schemes for self employment for backward classes persons, subject to the following conditions:

i. It will be for borrowings in 2009-10 and not on revolving basis.
ii. D. Devaraj Urs Backward Classes Development Corporation should improve recovery by 10% in 2009-10.
iii. 1% Guarantee Commission should be paid.

This order issues in concurrence of Finance Department vide its Note No. FD 438 Exp 3/09 dated: 11-9-2009.

By Order and in the name of the Governor of Karnataka,

P.R. 2485

**M.M. BHATTE**

Under Secretary to Government, Social Welfare Department.

**INFRASTRUCTURE DEVELOPMENT SECRETARIAT**

**CORRIGENDUM**

**No. IDD 113 DIA 2008, Bangalore, Dated: 29th October 2009**

In Government Order No. ಮೂಅಇ 113 ರಾಅವಿ 2008 Dated: 06.07.2009.

(1) In para 2, clause (ಈ) shall be read as below:

"The Gazetted Manager of the office of the Commissioner of Commercial Taxes shall verify and certify the correctness of the reimbursement claim for any month received from the Infrastructure Development Department within fifteen days from the date of receipt of the same if it is received after the 20th of the succeeding month. However, if the re-imbursement claim from infrastructure Development Department is received within the 20th of the succeeding month, it shall be certified within fifteen days after the 20th of that month".

(2) Wherever the word "VAT" appears, it shall be read as "Sales Tax" (ಮಾರಾಟ ತೆರಿಗೆ).

By order and in the name of the Governor of Karnataka,

**N. MANJULA GEETHA**

P.R. 2489

Under Secretary to Government,

Infrastructure Development Department.

**ಉನ್ನತ ಶಿಕ್ಷಣ ಸಚಿವಾಲಯ**

**ವಿಷಯ:** ಡಿ.ಎ.ಸಿ.ಜಿ(ಸರ್ಕಾರಿ) ಪಾಲಿಟೆಕ್ನಿಕ್ ಚಿಕ್ಕಮಗಳೂರು ಇಲ್ಲಿನ ಹಾಸ್ಟೆಲ್ ಕಟ್ಟಡದ ದುರಸ್ಥಿ ಕಾಮಗಾರಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1) ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ದಿನಾಂಕ 08.10.2009ರ ಪತ್ರ ಸಂಖ್ಯೆ: ಡಿಟಿಇ 14 ಬಿಎಲ್‌ಡಿ 2009.

**ಪ್ರಸ್ತಾವನೆ:**

ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಚಿಕ್ಕಮಗಳೂರು ಡಿ.ಎ.ಸಿ.ಜಿ (ಸರ್ಕಾರಿ) ಪಾಲಿಟೆಕ್ನಿಕ್ ಹಾಸ್ಟೆಲ್ ಕಟ್ಟಡದ ಛಾವಣಿ ಮಳೆಗಾಲದಲ್ಲಿ ಸೋರುತ್ತಿದ್ದು, ಅದರ ದುರಸ್ಥಿ, ಕಟ್ಟಡಕ್ಕೆ

ನೀರು ಸರಬರಾಜು, ಕಾಂಪೌಂಡ್ ನಿರ್ಮಾಣ, ವಿದ್ಯುಚ್ಛಕ್ತಿ ಮತ್ತು ಇತರೆ ಅತ್ಯವಶ್ಯಕ ಕಾಮಗಾರಿಗಳನ್ನು ತುರ್ತಾಗಿ ಕೈಗೆತ್ತಿಕೊಳ್ಳಬೇಕಾಗಿದ್ದು, ಈ ಸಂಬಂಧವಾಗಿ ಜಿಲ್ಲಾಧಿಕಾರಿಗಳು ಕಟ್ಟಡ ದುರಸ್ಥಿ ಮತ್ತು ಇತರೇ ಅಭಿವೃದ್ಧಿ ಕಾಮಗಾರಿಗಾಗಿ ಕಳುಹಿಸಿರುವ ರೂ. 27.00 ಲಕ್ಷಗಳಿಗೆ ರೇಖಾ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ಹಾಗೂ ಶೇ 30ರಷ್ಟು ಅನುದಾನ ಅಂದರೆ ರೂ. 08.10 ಲಕ್ಷ ಅನುದಾನವನ್ನು 2009–10ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ **"4202–02–104–1–01–139–ಯೋಜನೆ"** ಯಡಿಯಲ್ಲಿ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸದರಿ ಕಟ್ಟಡದ ವಿವಿಧ ದುರಸ್ಥಿ ಕಾಮಗಾರಿಗಳಿಗಾಗಿ ಅನುದಾನ ಬಿಡುಗಡೆಗೊಳಿಸಲು ಸರ್ಕಾರ ನಿರ್ಧರಿಸಿದೆ. ಆದುದರಿಂದ ಆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 265 ಯೋಯೋಕ 2009, ಬೆಂಗಳೂರು, ದಿನಾಂಕ: 27ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ 2009–10ನೇ ಸಾಲಿಗೆ ಒದಗಿಸಲಾಗಿರುವ ಅನುದಾನದಲ್ಲಿ ಚಿಕ್ಕಮಗಳೂರು ನಗರದ ಡಿ.ಎ.ಸಿ.ಜಿ. (ಸರ್ಕಾರಿ) ಪಾಲಿಟೆಕ್ನಿಕ್ ಹಾಸ್ಟೆಲ್ ಕಟ್ಟಡದ ದುರಸ್ಥಿ ಹಾಗೂ ಅಭಿವೃದ್ಧಿ ಕಾಮಗಾರಿಯ ರೇಖಾ ಅಂದಾಜು ರೂ. 25.00ಲಕ್ಷ ಮೊತ್ತಕ್ಕೆ ಆಡಳಿತಾತ್ಮಕ ಅನುಮೊದನೆ ನೀಡಲಾಗಿದೆ. ಹಾಗೂ ರೂ. 07.50 (ಏಳು ಲಕ್ಷದ ಐವತ್ತು ಸಾವಿರ ರೂಪಾಯಿಗಳು ಮಾತ್ರ)ಗಳನ್ನು ಲೆಕ್ಕಶೀರ್ಷಿಕೆ **"4202–02–104–1–01–139–ಯೋಜನೆ"** ಅಡಿಯಲ್ಲಿ ಭರಿಸಲು ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಈ ಕೆಳಕಂಡ ಷರತ್ತುಗಳನ್ನು ವಿಧಿಸಿ ಅನುಮತಿ ನೀಡಲಾಗಿದೆ.

**ಷರತ್ತುಗಳು:**

- ಈ ಕಾಮಗಾರಿಗಳನ್ನು ನಿಗದಿತ ಸಮಯದೊಳಗೆ ಅಗತ್ಯವಿರುವ ತಾಂತ್ರಿಕ ಅನುಮೋದನೆಯನ್ನು ಸಂಬಂಧಿಸಿದ ಅಧಿಕಾರಿಗಳಿಂದ ಪಡೆದು, ಪ್ರಥಮ ಪ್ರಾಶಸ್ತ್ಯ ನೀಡಿ ಕಾಮಗಾರಿಯನ್ನು ಕೈಗೊಂಡು ಗುಣಮಟ್ಟದ ಬಗ್ಗೆ ನಿಗಾವಹಿಸಲು ಕ್ರಮ ಕೈಗೊಳ್ಳತಕ್ಕದ್ದು.
- ಕಟ್ಟಡ ದುರಸ್ಥಿ ಕಾರ್ಯವನ್ನು ವಹಿಸುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು. ಪ್ರತಿ ಮಾಹೆಯ ಕಾಮಗಾರಿಯ ಪ್ರಗತಿ ವರದಿಯನ್ನು ಆಯಾ ಮಾಹೆಯ ಎಂ.ಎಂ.ಆರ್ ವರದಿಯಲ್ಲಿ ನಮೂದಿಸತಕ್ಕದ್ದು.
- ಮೇಲ್ಕಂಡ ಮೊತ್ತವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ1 ಟಿಎಫ್‌ಪಿ 2008, ದಿನಾಂಕ 16–05–2008ರಲ್ಲಿ ತಿಳಿಸಿರುವಂತೆ ವೆಚ್ಚ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2490 **ಎಸ್.ಎಂ. ನಂದಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಉನ್ನತ ಶಿಕ್ಷಣ ಇಲಾಖೆ (ಯೋಜನೆ)

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ:** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಹಾಸನ ಜಿಲ್ಲೆ ಅರಸೀಕೆರೆ ತಾಲ್ಲೂಕು, ಆಲೂರು ತಾಲ್ಲೂಕು ಮತ್ತು ಬೇಲೂರು ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಯೋಇ 309 ಪಿಟಿಪಿ 94, ದಿನಾಂಕ: 07–08–1995.

2) ಮುಖ್ಯಮಂತ್ರಿಯವರ ಕಛೇರಿ ಟಿಪ್ಪಣಿ ಪತ್ರ ಸಂ: ಮುಮಂ/ಆ.ಕಾ/203/2009 ದಿನಾಂಕ:22.07.2009.

3) ಮುಖ್ಯಮಂತ್ರಿಯವರ ಕಛೇರಿ ಟಿಪ್ಪಣಿ ಪತ್ರ ಸಂ:ಮುಮಂ/ಆ.ಕಾ/1242/2009 ದಿನಾಂಕ:22.07.2009.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ: 07–08–1995ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ / ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಮಾನ್ಯ ಯೋಜನಾ ಸಚಿವರ ಶಿಫಾರಸ್ಸು ಮೇರೆಗೆ ಮಾನ್ಯ ಮುಖ್ಯಮಂತ್ರಿಯವರು ಅನುಮೋದಿಸಿರುವಂತೆ ಹಾಸನ ಜಿಲ್ಲೆಯ ಅರಸೀಕೆರೆ ತಾಲ್ಲೂಕು, ಆಲೂರು ತಾಲ್ಲೂಕು ಮತ್ತು ಬೇಲೂರು ತಾಲ್ಲೂಕಿನ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿದೆ ಆದ್ದರಿಂದ, ಸರ್ಕಾರ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಯೋಇ 67 ಯೋವಿವಿ 2009, ಬೆಂಗಳೂರು, ದಿನಾಂಕ: 30ನೇ ಅಕ್ಟೋಬರ್ 2009**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಅನುಬಂಧ–1ರಲ್ಲಿ ನಮೂದಿಸಿರುವಂತೆ ಸದಸ್ಯರುಗಳನ್ನು ಹಾಸನ ಜಿಲ್ಲಾ ಮಟ್ಟದ/ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ, 1 & 2,

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

**ಅನುಬಂಧ – 1**

| ಕ್ರ ಸಂ. | ತಾಲ್ಲೂಕು | ಅಭ್ಯರ್ಥಿಗಳ ಹೆಸರು ಶ್ರೀಯುತರು/ಶ್ರೀಮತಿ | ವರ್ಗ |
|---|---|---|---|
| 1. | ಹಾಸನ ಜಿಲ್ಲೆ ಅರಸೀಕೆರೆ ತಾಲ್ಲೂಕು | 1. ಶ್ರೀಮತಿ ಡಿ.ಎಸ್. ಸೌಭಾಗಮ್ಮ ಕೋಂ, ಎಂ.ಎಸ್. ಪರಮಶಿವಪ್ಪ ಐನಹಳ್ಳಿ, ಅಣ್ಣಾಯಕನಹಳ್ಳಿ ಪೋ.ಅರಸೀಕೆರೆ ತಾ: | ಮಹಿಳೆ |
| | | 2. ಶ್ರೀ ಜೆ.ಆರ್. ಇಂದ್ರೇಶ್ ಬಿನ್ ರಂಗಯ್ಯ ಜಾವಗಲ್ ಗ್ರಾಮ, ಜಾವಗಲ್, ಅರಸೀಕೆರೆ ತಾ: | ಎಸ್.ಸಿ. |
| | | 3. ಶ್ರೀ ಶಿವಕುಮಾರ ಹೆಚ್.ಸಿ. ಬಿನ್ ಚನ್ನಬಸಪ್ಪ ಹಿರೀಸಾದರಹಳ್ಳಿ ಕಣಕಟ್ಟೆ ಹೋ, ಅರಸೀಕೆರೆ ತಾ: | ಸಾಮಾನ್ಯ |
| | | 4. ಶ್ರೀ ಬಸವರಾಜ್ ಬಿ.ಎಲ್. ಬಿನ್ ಲಿಂಗಪ್ಪ ಭೈರಗೊಂಡನಹಳ್ಳಿ ಪೋ. ಬಾಣಾವರ ಅರಸೀಕೆರೆ ತಾ: | ಸಾಮಾನ್ಯ |
| | | 5. ಶ್ರೀ ಹೆಚ್.ಎನ್. ನಂಜೇಗೌಡ ಬಿನ್ ಪ: ನಿಂಗೇಗೌಡ ಹಲಗೇನಹಳ್ಳಿ ಮುದುಡಿ ಪೋ. ಅರಸೀಕೆರೆ ತಾ: | ಹಿಂ.ವರ್ಗ |
| | | 6. ಶ್ರೀ ಲಕ್ಷ್ಮಿಚಂದ್ ಜೈನ್ ಬಿನ್ ಮಾಣಿಕ್ ಲಾಲ್ ಜೈನ್ ಭವನಸ್ಟ್ರೀಟ್ ಕೋಟೆ, ಬಾಣಾವರ ಅರಸೀಕೆರೆ ತಾ: | ಅ.ಸಂ. |
| 2. | ಆಲೂರು ತಾಲ್ಲೂಕು | 1. ಶ್ರೀ ಜವರ ಶೆಟ್ಟಿ ಬಿನ್ ಪುಟ್ಟಶೆಟ್ಟಿ ವೈ.ಎನ್.ಪುರ., ರಾಯ್ಯರ ಕೊಪ್ಪಲು ಪೋ. | ಬಿ.ಸಿ.ಎಂ. |
| | | 2. ಶ್ರೀ ಬಾಲೋಚನ ಬಿನ್ ಚಂದ್ರಯ್ಯ ಬ್ಯಾಬ, ಬೈರಾಪುರ ಪೋ. ಆಲೂರು ತಾಲ್ಲೂಕು, ಹಾಸನ ಜಿಲ್ಲೆ. | ಎಸ್.ಸಿ. |
| | | 3. ಶ್ರೀ ಕೃಷ್ಣಮೂರ್ತಿ ಬಿನ್ ದೇವೆಗೌಡ ಶಂಕರನ ಹಳ್ಳಿ, ಪಾಳ್ಯ ಪೋ: | ಸಾಮಾನ್ಯ |
| | | 4. ಶ್ರೀಮತಿ ಚಂದ್ರಕಲಾ ಕೋಂ ಮೋಹನ್ ನವಿಲ್‌ಹಳ್ಳಿ, ಮಗ್ಗೆ ಪೋ. | ಮಹಿಳೆ |
| | | 5. ಶ್ರೀಮತಿ ಜಯಪದ್ಮ ಕೋಂ ಧರಣೇಂದ್ರ ಕುಂದೂರು, ಕುಂದೂರು ಪೋ: | ಅ.ಸಂ. |
| | | 6. ಶ್ರೀ ಕೆ.ಆರ್.ಲೋಕೇಶ್ ಬಿನ್ ಕೆ.ರಂಗಪ್ಪ ಕದಾಳು, ಕದಾಳು ಅಂಚೆ. | ಸಾಮಾನ್ಯ |
| 3. | ಬೇಲೂರು ತಾಲ್ಲೂಕು | 1. ಶ್ರೀಮತಿ ಶಾಂತಮಣಿ ಬಿನ್ ಮಂಜೇಗೌಡ ನಿಡಗೂಡು ಗ್ರಾಮ ಮತ್ತು ಅಂಚೆ, ಬೇಲೂರು | ಮಹಿಳೆ |
| | | 2. ಶ್ರೀ ಬೀರೆಗೌಡ ಬಿನ್ ಮಂಜೇಗೌಡ ಸೊಪ್ಪಿನಹಳ್ಳಿ ಗಾಮ, ಘಟ್ಟದಹಳ್ಳಿ ಪೋಸ್ಟ್, | ಬಿ.ಸಿ.ಎಂ. |

| ಕ್ರ. ಸಂ. | ತಾಲ್ಲೂಕು | ಅಭ್ಯರ್ಥಿಗಳ ಹೆಸರು ಶ್ರೀಯುತರು/ಶ್ರೀಮತಿ | ವರ್ಗ |
|---|---|---|---|
| | | 3. ಶ್ರೀ ಪುಟ್ಟಸ್ವಾಮಿ ಬಿನ್ ತಿಮ್ಮಬೋವಿ ಬಳ್ಳೂರು ಗ್ರಾಮ ಮತ್ತು ಅಂಚೆ, ಬೇಲೂರು | ಎಸ್.ಸಿ. |
| | | 4. ಶ್ರೀ ಮೋಹನ್ ಕುಮಾರ್ ಕೆ.ಸಿ. ಬಿನ್ ಚನ್ನಬಸವೇಗೌಡ ಕೋರಟೀಕೆರೆ ಗ್ರಾಮ, ಬಂಟೇನಹಳ್ಳಿ ಪೋಸ್ಟ್, ಬೇಲೂರು | ಸಾಮಾನ್ಯ |
| | | 5. ಶ್ರೀ ಶಿವವೀರ ಸಂಗಪ್ಪ ಬಿನ್ ಸಂಗಪ್ಪಗೌಡ ಹಾಡ್ಲಗೆರೆ, (ಗ್ರಾ) ಮಾಳೇಗೆರೆ (ಪೋ) | ಸಾಮಾನ್ಯ |
| | | 6. ಶ್ರೀ. ನವನಂದನ್ ಬಿನ್ ಜಯಚಂದ್ರಯ್ಯ ಅಡುಗೂರು ಗ್ರಾ ಮತ್ತು ಪೋ, ಬೇಲೂರು ತಾ: | ಅ.ಸಂ. |

**ಬಿ. ಚಿಕ್ಕರಾಜು**

ಪಿ.ಆರ್. 2494

ಸರ್ಕಾರದ ಅಧೀನ ಕಾರ್ಯದರ್ಶಿ, 1 & 2,
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ:** 2009–10ನೇ ಸಾಲಿನಲ್ಲಿ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಕ್ಷೇತ್ರಗಳ ಉನ್ನತೀಕರಣ ಕೆಲಸ ಕಾರ್ಯಗಳಿಗಾಗಿ ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು (KBITS), ಸಂಸ್ಥೆಗೆ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ ಐಟಿಡಿ30ಎಡಿಎಂ2009, ದಿನಾಂಕ 12–5–09.

2. ಸರ್ಕಾರಿ ಆದೇಶ ಸಂಖ್ಯೆ ಮಾತಂಇ 19 ಅಚವಿ 2009, ದಿನಾಂಕ 21–5–09.

3. ನಿರ್ದೇಶಕರು, ಮಾತಂ ಜೈತಂ ನಿರ್ದೇಶನಾಲಯರವರ ಪತ್ರ ಸಂಖ್ಯೆ ಮಾತಂನಿ/ಲೆಕ್ಕ–1/12/ಅನುದಾನ ಅನುಷ್ಠಾನ/ 501/2009–10 ದಿನಾಂಕ:13–10–2009

**ಪ್ರಸ್ತಾವನೆ:**

ಮೇಲೆ [1]ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ ಉನ್ನತೀಕರಣದ ಲೆಕ್ಕ ಶೀರ್ಷಿಕೆ **'3451–00–090–2–01–ಮಾಹಿತಿ ತಂತ್ರಜ್ಞಾನ ಉನ್ನತೀಕರಣ ಮತ್ತು ಅಭಿವೃದ್ಧಿ–059–ಇತರೆ ಖರ್ಚುಗಳು–(ಯೋಜನೆ)'** ಇದರ ಅಡಿಯಲ್ಲಿ 2009–10ನೇ ಸಾಲಿಗೆ ಒದಗಿಸಲಾಗಿದ್ದ ರೂ. 920.00 ಲಕ್ಷಗಳ ಅನುದಾನದಲ್ಲಿ ಬೆಂಗಳೂರು ಐಟಿ ಇನ್ 2009 ಮತ್ತು ಬೆಂಗಳೂರು ಬಯೋ 2009 ಇವೆಂಟ್ಸ್‌ಗಳನ್ನೊಳಗೊಂಡಂತೆ ಮಾಹಿತಿ ತಂತ್ರಜ್ಞಾನ ಜೈವಿಕ ತಂತ್ರಜ್ಞಾನ ಚಟುವಟಿಕೆಗಳಿಗೆ ರೂ. 289.00 ಲಕ್ಷಗಳನ್ನು ನಿಗದಿಪಡಿಸಲಾಗಿದೆ.

ಮೇಲೆ [2]ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2009–10ನೇ ಸಾಲಿನಲ್ಲಿ ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು (KBITS) ಸಂಸ್ಥೆಯ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಕ್ಷೇತ್ರಗಳ ಉನ್ನತೀಕರಣ ಮತ್ತು ಅಭಿವೃದ್ಧಿಗೆ ಸಂಬಂಧಿಸಿದಂತೆ ಹಮ್ಮಿಕೊಂಡಿರುವ ಕಾರ್ಯ ಚಟುವಟಿಕೆಗಳಿಗಾಗಿ ರೂ. 100.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ [3]ರಲ್ಲಿ ಓದಲಾದ ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ತಮ್ಮ ಪತ್ರದಲ್ಲಿ ವಿವರಿಸಿರುವಂತೆ ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು (KBITS) ಸಂಸ್ಥೆಯು 2009–10ನೇ ಸಾಲಿನಲ್ಲಿ ಅಕ್ಟೋಬರ್ 2009ರಿಂದ ಡಿಸೆಂಬರ್ 2009ರವರೆಗೆ ಹಮ್ಮಿಕೊಳ್ಳುವ ಕಾರ್ಯಕ್ರಮಗಳ ಮತ್ತು ಈಗಾಗಲೇ ಭಾಗವಹಿಸಿರುವ ವಸ್ತು ಪ್ರದರ್ಶನದ ಜಾಹೀರಾತುಗಳ ಬಿಡುಗಡೆ ಹಾಗೂ ಬ್ರೋಚರ್/ ಸಿಡಿಗಳ ತಯಾರಿಕೆಯ ವೆಚ್ಚಗಳನ್ನು ಭರಿಸಲು ರೂ. 100.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಸದರಿಯವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ನವೆಂಬರ್ ತಿಂಗಳಲ್ಲಿ ನಡೆಯುವ ಬೆಂಗಳೂರು ಐಟಿ ಬಿಜ್ 2009ಕ್ಕೆ ಅಗತ್ಯವಿರುವ ಅನುದಾನವನ್ನು ಪರಿಗಣಿಸಿ ಸಧ್ಯಕ್ಕೆ ರೂ. 50 ಲಕ್ಷಗಳ ಅನುದಾನವನ್ನು ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 19 ಅಚವಿ 2009, ಬೆಂಗಳೂರು, ದಿನಾಂಕ: 31ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ 2009–10ನೇ ಸಾಲಿನಲ್ಲಿ ನವೆಂಬರ್ ತಿಂಗಳಲ್ಲಿ ನಡೆಯುವ ಬೆಂಗಳೂರು ಐಟಿ ಬಿಜ್ 2009ಕ್ಕೆ ಅಗತ್ಯವಿರುವ ರೂ. 50 ಲಕ್ಷಗಳ [ರೂ. ಐವತ್ತು ಲಕ್ಷಗಳು ಮಾತ್ರ] ಅನುದಾನವನ್ನು ಮಾಹಿತಿ ತಂತ್ರಜ್ಞಾನ

ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ ನಿರ್ದೇಶಕರ ಮುಖಾಂತರ ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು (KBITS) ಸಂಸ್ಥೆಗೆ ಬಿಡುಗಡೆ ಮಾಡಲು ಸರ್ಕಾರವು ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ವಿತರಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ **'3451–00–090–2–01– ಮಾಹಿತಿ ತಂತ್ರಜ್ಞಾನ ಉನ್ನತೀಕರಣ ಮತ್ತು ಅಭಿವೃದ್ಧಿ–059–ಇತರೆ ಖರ್ಚುಗಳು–(ಯೋಜನೆ)'** ಇದರ ಅಡಿಯಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಈ ಅನುದಾನದ ಬಳಕೆಯ ಬಗ್ಗೆ ಉಪಯೋಗಿತಾ ದೃಢೀಕರಣ ಪತ್ರವನ್ನು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು (KBITS) ಇವರಿಂದ ಪಡೆದು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶಗಳ ಸಂಖ್ಯೆ: ಎಫ್.ಡಿ 01 ಟಿಎಫ್‌ಪಿ 2008, ದಿನಾಂಕ. 16.05.2008ರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 2499 ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಶ್ರೀ ಕೆ.ಎ.ಅಥೋಣಿ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ಪ್ರಸ್ತುತ ನಿವೃತ್ತ), ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಜೋಯಿಡಾ ಮತ್ತು ಶ್ರೀ ಎಂ.ಬಿ.ಬಾವಳಕರ, ಅಂದಿನ ಉಗ್ರಾಣ ಸಹಾಯಕ (ಪ್ರಸ್ತುತ ನಿವೃತ್ತ) ಇವರ ವಿರುದ್ಧದ ಇಲಾಖಾ ವಿಚಾರಣೆ–ಅಂತಿಮ ಆದೇಶ.

**ಓದಲಾಗಿದೆ:**
1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರ ಪತ್ರಗಳ ಸಂ. ಜಿಪಂ: ಆ: ಲೋಕೋ:61:00–01, ದಿ:3–4–2003 ಮತ್ತು ಸಂಖ್ಯೆ ಜಿಪಅ:ಲೋಕೋ: 04–05, ದಿ: 28–07–04
2. ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ 17 ಇಎನ್‌ಕ್ಯೂ:03, ದಿ: 3–9–04.
3. ಕಾರಣ ಕೇಳುವ ನೋಟೀಸು ಸಂಖ್ಯೆ. ಗ್ರಾಅಪ 17 ಇಎನ್‌ಕ್ಯೂ:03, ದಿ: 3–9–04
4. ಜ್ಞಾಪನ ಪತ್ರ ಸಂಖ್ಯೆ ಗ್ರಾಅಪ 17 ಇಎನ್‌ಕ್ಯೂ:03, ದಿ: 3–9–04.
5. ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ 17 ಇಎನ್‌ಕ್ಯೂ:03, ದಿ: 19–7–06
6. ವಿಚಾರಣಾಧಿಕಾರಿಗಳ ವರದಿ ದಿನಾಂಕ: 14–05–2007.
7. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಜಿಲ್ಲಾ ಪಂಚಾಯತ್, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರ ಪತ್ರ ಸಂ. ಜಿಪಂಆ: ಲೋಕೋ:ಇವಿ:ಸಿಆರ್–61:2008–09, ದಿ: 19–01–2009

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರಗಳಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರು ಶ್ರೀ ಕೆ.ಎ.ಅಥೋಣಿ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಇವರು ಉತ್ತರ ಕನ್ನಡ ಜಿಲ್ಲೆಯ ಜೋಯಿಡಾ ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗದಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಅಂದಾಜು ರೂ. 1,67,718–00 ಲಕ್ಷದ ಉಗ್ರಾಣ ಕೊರತೆ ಉಂಟಾಗಿದ್ದು, ಸದರಿ ಉಗ್ರಾಣ ಕೊರತೆಗೆ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಮತ್ತು ಉಗ್ರಾಣ ಸಹಾಯಕ ಇಬ್ಬರು ಜವಾಬ್ದಾರರಾಗಿದ್ದು, ಈ ಇಬ್ಬರ ಮೇಲೆ ಕ್ರಮ ಜರುಗಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿದ್ದರು.

ಸರ್ಕಾರವು ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಶ್ರೀ ಎಂ.ಬಿ. ಬಾವಳಕರ, ಇವರು ದ್ವಿತೀಯ ದರ್ಜೆ ಉಗ್ರಾಣ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಸದರಿ ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗದಲ್ಲಿ ಉಗ್ರಾಣ ಸಾಮಾಗ್ರಿಗಳ ದುರುಪಯೋಗವಾಗಿರುವುದು ಕಂಡು ಬಂದಿದ್ದರಿಂದ ಹಾಗೂ ಸದರಿ ನೌಕರರು ನಿವೃತ್ತರಾಗಿರುವುದರಿಂದ ಇವರ ವಿರುದ್ಧ ಕರ್ನಾಟಕ ರಾಜ್ಯ ಸೇವಾ ನಿಯಮಾವಳಿಗಳ ನಿಯಮ 214ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕ.ಸ.ಸೇ. (ವ.ನಿ. ಮತ್ತು ಮೇ) ನಿಯಮಾವಳಿಗಳ ನಿಯಮ 11, 11–ಎರಲ್ಲಿ ನಿಗಧಿ ಪಡಿಸಿರುವ ಕಾರ್ಯವಿಧಾನವನ್ನು ಅನುಸರಿಸಿ ಇಲಾಖಾ ವಿಚಾರಣೆ ನಡೆಸಬೇಕೆಂದು ಆದೇಶಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಕಾರಣ ಕೇಳುವ ನೋಟೀಸು ಹಾಗೂ (4)ರ ಜ್ಞಾಪನದಲ್ಲಿ ಕ್ರಮವಾಗಿ ಶ್ರೀ ಕೆ.ಎ.ಅಥೋನಿ ಹಾಗೂ ಶ್ರೀ ಎಂ.ಬಿ. ಬಾವಳಕರ ಇವರುಗಳಿಗೆ ದೋಷಾರೋಪಣಾ ಪಟ್ಟಿಗಳನ್ನು ಅನುಬಂಧ–1 ರಿಂದ 4ರಲ್ಲಿ ಜಾರಿ ಮಾಡಲಾಗಿತ್ತು. ಆರೋಪಿತರು ಈ ಬಗ್ಗೆ ಲಿಖಿತ ಹೇಳಿಕೆಗಳನ್ನು ಸಲ್ಲಿಸಿ, ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿದ್ದರಿಂದ, ಪ್ರಕರಣದಲ್ಲಿ ಸತ್ಯಾಸತ್ಯತೆಯನ್ನರಿಯುವ ಸಲುವಾಗಿ ಜಂಟಿ ಇಲಾಖಾ ವಿಚಾರಣೆ ನಡೆಸುವುದು ಸೂಕ್ತವೆಂದು ನಿರ್ಣಯಿಸಿ, ಸರ್ಕಾರವು ಮೇಲೆ (5)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಎಸ್. ಇಂದೂಧರ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಪ್ರಕರಣದಲ್ಲಿನ ಆರೋಪಗಳ ಬಗ್ಗೆ ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (6)ರಲ್ಲಿ ಓದಲಾದ ದಿನಾಂಕ: 14–05–2007ರ ತಮ್ಮ ವರದಿಯಲ್ಲಿ ಸಾಕ್ಷಿದಾರರ ಹೇಳಿಕೆ ಹಾಗೂ ದಾಖಲೆಗಳನುಸಾರ ಆರೋಪಿತರ ವಿರುದ್ಧ ಹೊರಿಸಲಾದ ಆರೋಪಗಳು ರುಜುವಾತಾಗಿರುವುದಿಲ್ಲವೆಂದು ತಿಳಿಸಿರುತ್ತಾರೆ. ಸದರಿ ವಿಚಾರಣಾ ವರದಿಯ ಬಗ್ಗೆ ಪರಿಶೀಲಿಸಿ ಅಭಿಪ್ರಾಯ ನೀಡುವಂತೆ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಉತ್ತರ ಕನ್ನಡ ಜಿಲ್ಲಾ ಪಂಚಾಯತ್, ಕಾರವಾರ ಇವರನ್ನು ಕೋರಲಾಗಿತ್ತು.

ಮೇಲೆ (7)ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಕಾರವಾರ, ಇವರು ವರದಿ ಮಾಡುತ್ತಾ, ಸದರಿ ವಿಚಾರಣಾ ವರದಿಯನ್ನು ಪರಿಶೀಲಿಸಲಾಗಿ, ಜೋಯಿಡಾ ಉಪ ವಿಭಾಗದಲ್ಲಿನ ಉಗ್ರಾಣ ಸಾಮಗ್ರಿ ಕೊರತೆಗೆ ಸಂಬಂಧಿಸಿದಂತೆ ಕಾರ್ಯಪಾಲಕ ಇಂಜಿನಿಯರ್, ಪಂ.ರಾ.ಇಂ.ಉಪ ವಿಭಾಗ, ಶಿರಸಿ ಇವರಿಂದ ದಾಖಲೆಗಳನ್ನು / ಸಾಮಗ್ರಿಗಳನ್ನು ಭೌತಿಕ ತಪಾಸಣೆಗೊಳಿಸಿ ಪರಿವೀಕ್ಷಣೆ ನಡೆಸಿ ಲೆಕ್ಕ ಹೊಂದಾಣಿಕೆ ಮಾಡಿದಾಗ ಒಟ್ಟು ರೂ. 77,925–00ಗಳ ಸಾಮಗ್ರಿಗಳ ಕೊರತೆ ಇರುವುದು ಕಂಡುಬಂದಿರುತ್ತದೆ ಸದರಿ ಮೊತ್ತಕ್ಕೆ ಕೆಳಕಂಡ ಕಿರಿಯ ಇಂಜಿನಿಯರ್/ಸಹಾಯಕ ಇಂಜಿನಿಯರ್‌ಗಳು ಕಾರಣರಾಗಿದ್ದು, ಅವರುಗಳಿಂದ ಕೆಳಕಂಡಂತೆ ವಸೂಲಿ ಮಾಡುವಂತೆ ಶಿಫಾರಸ್ಸು ಮಾಡಿರುತ್ತಾರೆ.

| ಕ್ರ. ಸಂ. | ಇಂಜಿನಿಯರ್ ಹೆಸರು | ಉಗ್ರಾಣ ಸಾಮಗ್ರಿಗಳ ಕೊರತೆಯ ಮೌಲ್ಯ |
|---|---|---|
| 1) | ಶ್ರೀ ವೈ.ಟಿ.ರಾಜಣ್ಣ, ಸಹಾಯಕ ಇಂಜಿನಿಯರ್. | ರೂ. 32,451–00 |
| 2) | ಶ್ರೀ ಗೌರೀಶಗೌಡ, ಕಿರಿಯ ಇಂಜಿನಿಯರ್. | ರೂ. 35,266 –00 |
| 3) | ಶ್ರೀ ಟಿ.ಜಿ. ಫರ್ನಾಂಡೀಸ್, ಕಿರಿಯ ಇಂಜಿನಿಯರ್. | ರೂ. 10,208–00 |

ಸರ್ಕಾರವು ಪ್ರಕರಣವನ್ನು ಸಮಗ್ರವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಗ್ರಾಅಪ 17 ಇಎನ್‌ಕ್ಯೂ 03, ಬೆಂಗಳೂರು, ದಿನಾಂಕ: 9ನೇ ನವೆಂಬರ್ 2009**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಪ್ರಕರಣದಲ್ಲಿ ಸಲ್ಲಿಸಲಾಗಿರುವ ವಿಚಾರಣಾ ವರದಿಯನ್ನು ಒಪ್ಪಿ, ಶ್ರೀ ಕೆ.ಎ. ಅಥೋನಿ, ಅಂದಿನ ಸ.ಕಾ.ಇಂ. (ಪ್ರಸ್ತುತ ನಿವೃತ್ತ), ಮತ್ತು ಶ್ರೀ ಎಂ.ಬಿ. ಬಾವಳಕರ್, ಅಂದಿನ ಉಗ್ರಾಣ ಸಹಾಯಕ (ಪ್ರಸ್ತುತ ನಿವೃತ್ತ), ಪಂ.ರಾ.ಇಂ. ಉಪವಿಭಾಗ, ಜೋಯಿಡಾ ಇವರುಗಳನ್ನು ಆರೋಪ ಮುಕ್ತಗೊಳಿಸಿ ಆದೇಶಿಸಿದೆ.

ಪ್ರಕರಣದಲ್ಲಿ ಸರ್ಕಾರಕ್ಕೆ ಉಂಟಾದ ಒಟ್ಟು ನಷ್ಟ ರೂ. 77,925–00ಗಳನ್ನು ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ (1) ಶ್ರೀ ವೈ.ಟಿ.ರಾಜಣ್ಣ ಸಹಾಯಕ ಇಂಜಿನಿಯರ್, (2) ಶ್ರೀ ಗೌರೀಶಗೌಡ, ಕಿರಿಯ ಇಂಜಿನಿಯರ್ ಮತ್ತು (3) ಶ್ರೀ ಟಿ.ಜಿ. ಫರ್ನಾಂಡೀಸ್, ಕಿರಿಯ ಇಂಜಿನಿಯರ್ ಇವರುಗಳಿಂದ ವಸೂಲಿ ಮಾಡಲು ನಿಯಮಾನುಸಾರ ಜರೂರು ಕ್ರಮ ತೆಗೆದುಕೊಳ್ಳಬೇಕೆಂದು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಉತ್ತರ ಕನ್ನಡ ಜಿಲ್ಲಾ ಪಂಚಾಯತ್, ಕಾರವಾರ ಇವರಿಗೆ ನಿರ್ದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ವೈ. ಸಾಗರ**

ಪಿ.ಆರ್. 2542

ಸರ್ಕಾರದ ಅಧೀನ ಕಾರ್ಯದರ್ಶಿ, (ಸೇವೆಗಳು–ಎ)

ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ಫಾತಿಮಾ ಬಾನು, ವೈದ್ಯರ ದರ್ಜೆ–**2**(ಯು), ಸರ್ಕಾರಿ ಯುನಾನಿ ಚಿಕಿತ್ಸಾಲಯ ಜಯಮಹಲ್, ಬೆಂಗಳೂರು ರವರನ್ನು ರಾಷ್ಟ್ರೀಯ ಯುನಾನಿ ವೈದ್ಯಕೀಯ ಸಂಸ್ಥೆ, ಬೆಂಗಳೂರು ಇಲ್ಲಿ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಆಯುಷ್ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಆಯುಷ್ /33/ಸಿಬ್ಬಂದಿ (4)/2009–10, ದಿನಾಂಕ:13–10–2009.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 13–10–2009ರ ಪತ್ರದಲ್ಲಿ ನಿರ್ದೇಶಕರು, ಆಯುಷ್ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರದಲ್ಲಿ, ಡಾ:ಫಾತಿಮಾ ಬಾನು, ವೈದ್ಯರು ದರ್ಜೆ–2(ಯು), ಸರ್ಕಾರಿ ಯುನಾನಿ ಚಿಕಿತ್ಸಾಲಯ ಜಯಮಹಲ್, ಬೆಂಗಳೂರು ಇವರನ್ನು Moalijat ಎಂಬ ವಿಷಯಲ್ಲಿ ಬೆಂಗಳೂರಿನ ರಾಷ್ಟ್ರೀಯ ಯುನಾನಿ ವೈದ್ಯಕೀಯ ಸಂಸ್ಥೆಯಲ್ಲಿ 2009–10ನೇ ಸಾಲಿನ ಶೈಕ್ಷಣಿಕ ವರ್ಷದಿಂದ ಸ್ನಾತಕೋತ್ತರ ವ್ಯಾಸಂಗ ಮಾಡಲು ಆಯ್ಕೆ ಮಾಡಿದ್ದು, ಪ್ರವೇಶ ಪಡೆದಿದ್ದಾರೆಂದು ತಿಳಿಸಿದ್ದಾರೆ. ಹಾಗೂ ಸದರಿ ವೈದ್ಯರು ದರ್ಜೆ–2(ಯು) ಸ್ನಾತಕೋತ್ತರ ವ್ಯಾಸಂಗಕ್ಕಾಗಿ ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 61ರ ಅಪೆಂಡಿಕ್ಸ್ II-A (1) ರನ್ವಯ ನಿಗದಿಪಡಿಸಿದ ಷರತ್ತು ಮತ್ತು ನಿಬಂಧನೆಗಳನ್ನು ಪೂರೈಸಿರುತ್ತಾರೆಂದು ತಿಳಿಸಿ, ಮೂರು ವರ್ಷಗಳ ಅವಧಿಗೆ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸಲು ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

ಸರ್ಕಾರವು ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ. ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 411 ಪಿಐಎಂ 2009, ಬೆಂಗಳೂರು, ದಿ: 4ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಡಾ:ಫಾತಿಮಾ ಬಾನು, ವೈದ್ಯರು ದರ್ಜೆ–2 (ಯು), ಸರ್ಕಾರಿ ಯುನಾನಿ ಚಿಕಿತ್ಸಾಲಯ ಜಯಮಹಲ್, ಬೆಂಗಳೂರು, ಇವರನ್ನು 2009–10 ನೇ ಸಾಲಿನ ಸ್ನಾತಕೋತ್ತರ ಪದವಿ ವ್ಯಾಸಂಗಕ್ಕಾಗಿ ಬೆಂಗಳೂರಿನ ರಾಷ್ಟ್ರೀಯ ಯುನಾನಿ ವೈದ್ಯಕೀಯ ಸಂಸ್ಥೆಯಲ್ಲಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 61ರ ಅಪೆಂಡಿಕ್ಸ್ II-A (1) ನಿಯಮದನ್ವಯ ಈ ಕೆಳಗಿನ ಷರತ್ತು ಮತ್ತು ನಿಬಂಧನೆಗಳನ್ನು ಪೂರೈಸುವ ಷರತ್ತಿಗೊಳಪಟ್ಟು ಮೂರು ವರ್ಷಗಳ ಅವಧಿಗೆ ನಿಯೋಜಿಸಲು ಸರ್ಕಾರದ ಮಂಜೂರಾತಿ ನೀಡಿದೆ ಹಾಗೂ ಇವರ ವೇತನ/ಭತ್ಯಗಳ ಉದ್ದೇಶಕ್ಕಾಗಿ ಇವರ ಹುದ್ದೆಯ ಲೀನನ್ನು ಸರ್ಕಾರಿ ಯುನಾನಿ ವೈದ್ಯಕೀಯ ಮಹಾವಿದ್ಯಾಲಯ ಇಲ್ಲಿನ ಉಪನ್ಯಾಸಕರ ಹುದ್ದೆಗೆ ಸ್ಥಳಾಂತರಿಸಲಾಗಿದೆ.

1) ಅವರು ಹುದ್ದೆಯ ಮೇಲಿನ ಹಕ್ಕನ್ನು ಮುಂದುವರೆಸುವುದು.
2) ಅವರು ವಿದ್ಯಾಭ್ಯಾಸದ ಅವಧಿಯಲ್ಲಿ ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 8(15)ಸಿ ಪ್ರಕಾರ ಕೆಲಸದ ಮೇಲಿದ್ದಾರೆಂದು ಪರಿಗಣಿಸುವುದು.
3) ಈ ಅವಧಿಯಲ್ಲಿ ಅವರು ಪಡೆಯುತ್ತಿರುವ ವೇತನ ಮತ್ತು ಇತರೆ ಭತ್ಯೆಗಳನ್ನು ಯಥಾವತ್ತಾಗಿ ಮುಂದುವರೆಸುವುದು.
4) ಸ್ನಾತಕೋತ್ತರ ಪದವಿ ಕೋರ್ಸಿಗೆ ಪ್ರವೇಶದ ಮುನ್ನ ಅವರ ಕೆ.ಸಿ.ಎಸ್.ಆರ್. ನಿಯಮಾವಳಿಗಳ ನಮೂನೆ–19ರಲ್ಲಿ ಸ್ಟಾಂಪ್ ಪೇಪರ್‌ನಲ್ಲಿ ಒಪ್ಪಿಗೆ ಪ್ರಮಾಣ ಪತ್ರ ನೀಡುವುದು.
5) ವ್ಯಾಸಂಗಕ್ಕೆ ಸೇರಲು ಕೇಂದ್ರ ಸ್ಥಾನದಿಂದ ವ್ಯಾಸಂಗದ ಸ್ಥಳಕ್ಕೆ ಮೊದಲ ಬಾರಿಗೆ ಹೋಗಲು ಮತ್ತು ವ್ಯಾಸಂಗದ ಅವಧಿ ಮುಗಿದ ನಂತರ ವಾಪಸ್ಸು ಬರಲು ಪ್ರವಾಸದ ಮೇಲಿದ್ದಂತೆ ಪ್ರಯಾಣ ಭತ್ಯೆ ನೀಡುವುದು.
6) ಉನ್ನತ ಶಿಕ್ಷಣಕ್ಕೆ ನಿಯೋಜಿಸಲ್ಪಟ್ಟ ವೈದ್ಯರು ಕೆ.ಸಿ.ಎಸ್.ಆರ್. ನಿಯಾವಳಿಗಳಲ್ಲಿ ಉನ್ನತ ವ್ಯಾಸಂಗಕ್ಕೆ ಲಭ್ಯವಿರುವ ಸವಲತ್ತುಗಳನ್ನು ಮಾತ್ರ ಪಡೆಯತಕ್ಕದ್ದು.
7) ಈ ನಿಯೋಜನೆಯು ಸದರಿ ವೈದ್ಯರಿಗೆ ಪ್ರಥಮ ನಿಯೋಜನೆ ಮತ್ತು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮಗಳಿಗೆ ಸಡಿಲಕೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಕೃಷ್ಣಮೂರ್ತಿ**

ಪಿ.ಆರ್. 2543

ಸರ್ಕಾರದ ಅಧೀನ ಕಾರ್ಯದರ್ಶಿ–2,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ವಿಷಯ:** ಡಾ. ಹೆಚ್.ವಿ. ಚಂದ್ರಕುಮಾರ್, ಉಪನ್ಯಾಸಕರು, ನೇತ್ರಚಿಕಿತ್ಸಾ ವಿಭಾಗ, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ:** 1) ಪತ್ರ ಸಂಖ್ಯೆ: ಆ(3)/147/2005-06, ದಿನಾಂಕ 15-12-2006

2) ಸರ್ಕಾರದ ನೋಟೀಸ್ ಸಂಖ್ಯೆ: ಆಕುಕ 5 ಎಂಎಂಸಿ 2007, ದಿನಾಂಕ 20-01-2007

3) ಪತ್ರ ಸಂಖ್ಯೆ: ಎಸ್.ಆರ್.ಓ(3)/47/05-06 ದಿನಾಂಕ 20-08-2008

4) ಸರ್ಕಾರದ ಆದೇಶ ಸಂಖ್ಯೆ: ಆಕುಕ 45 ಕೆವಿಎಂ 2008 ದಿನಾಂಕ: 30-8-2008

5) ಪತ್ರ ಸಂಖ್ಯೆ: ಎಸ್.ಆರ್.ಓ(3)/47/05-06 ದಿನಾಂಕ 15-09-2009

**ಪ್ರಸ್ತಾವನೆ:**

ವೈದ್ಯಕೀಯ ಶಿಕ್ಷಣ ನಿರ್ದೇಶಕರು ಮೇಲೆ (1)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಡಾ. ಹೆಚ್.ವಿ. ಚಂದ್ರಕುಮಾರ್ ಉಪನ್ಯಾಸಕರು, ನೇತ್ರಚಿಕಿತ್ಸಾ ವಿಭಾಗ, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇವರು ದಿನಾಂಕ: 24-04-2004ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿರುವುದಾಗಿ ವರದಿ ಮಾಡುತ್ತಾ ಅವರ ವಿರುದ್ಧ ಶಿಸ್ತುಕ್ರಮ ತೆಗೆದುಕೊಳ್ಳಲು ಕರಡು ದೋಷಾರೋಪಣಪಟ್ಟಿಯನ್ನು ತಯಾರಿಸಿ ಸಲ್ಲಿಸಿದ್ದರು.

ಡಾ. ಹೆಚ್.ವಿ. ಚಂದ್ರಕುಮಾರ್, ಉಪನ್ಯಾಸಕರು, ನೇತ್ರಚಿಕಿತ್ಸಾ ವಿಭಾಗ, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇವರಿಗೆ ಅನುಬಂಧ-I ರಿಂದ IV ರವರೆಗಿನ ದೋಷಾರೋಪಣಾ ಪಟ್ಟಿಯನ್ನು ಒಳಗೊಂಡ ಮೇಲೆ (2)ರಲ್ಲಿ ಓದಲಾದ ಕಾರಣ ಕೇಳುವ ನೋಟೀಸ್‌ನಲ್ಲಿ ಹೊರಡಿಸಲಾಗಿತ್ತು. ಇಳಾಸದಾರರು ಇಲ್ಲವೆಂದು ನೋಟೀಸು ಜಾರಿಯಾಗದೇ ಹಿಂದಿರುಗಿ ಬಂದಿರುತ್ತದೆ.

ವೈದ್ಯಕೀಯ ಶಿಕ್ಷಣ ನಿರ್ದೇಶಕರು ಮೇಲೆ (3)ರಲ್ಲಿ ಓದಲಾದ ಪತ್ರದೊಂದಿಗೆ ಸದರಿಯವರ ಅನಧಿಕೃತ ಗೈರುಹಾಜರಿ ಬಗ್ಗೆ ಹೊಸದಾಗಿ ಕರಡು ದೋಷಾರೋಪಣಾ ಪಟ್ಟಿಯನ್ನು ತಯಾರಿಸಿ ಸಲ್ಲಿಸದ್ದರು.

ಮೇಲೆ (4)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಡಾ. ಹೆಚ್.ವಿ. ಚಂದ್ರಕುಮಾರ್ ಉಪನ್ಯಾಸಕರು (ಅನಧಿಕೃತ ಗೈರುಹಾಜರಿಯಲ್ಲಿರುವ), ನೇತ್ರಚಿಕಿತ್ಸಾ ವಿಭಾಗ, ಬೆಂಗಳೂರು ಇವರನ್ನು ಅವರ ಅನಧಿಕೃತ ಗೈರುಹಾಜರಿ ದುರ್ನಡತೆಗಾಗಿ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಅಮಾನತ್ತಿನಲ್ಲಿಡಲಾಗಿತ್ತು.

ವೈದ್ಯಕೀಯ ಶಿಕ್ಷಣ ನಿರ್ದೇಶಕರು ಮೇಲೆ (5)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಡಾ. ಹೆಚ್.ವಿ. ಚಂದ್ರಕುಮಾರ್ ಉಪನ್ಯಾಸಕರು, ನೇತ್ರಚಿಕಿತ್ಸಾ ವಿಭಾಗ, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇವರು ದಿನಾಂಕ: 24-04-2004ರಿಂದ ತಮ್ಮ ಹುದ್ದೆಗೆ ಸಲ್ಲಿಸಿರುವ ರಾಜಿನಾಮೆ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕುಷವಾಗಿ ಪರಿಶೀಲಿಸಿ ನಂತರ ಡಾ. ಹೆಚ್.ವಿ. ಚಂದ್ರಕುಮಾರ್ ಉಪನ್ಯಾಸಕರು, (ಅನಧಿಕೃತ ಗೈರುಹಾಜರಿಯಲ್ಲಿ) ಇವರ ಅಮಾನತ್ತು ಆದೇಶವನ್ನು ರದ್ದುಪಡಿಸಿ, ಶಿಸ್ತು ಕ್ರಮವನ್ನು ಕೈಬಿಟ್ಟು ರಾಜೀನಾಮೆಯನ್ನು ಅಂಗೀಕರಿಸಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆಕುಕ 5 ಎಂಎಂಸಿ 2007, ಬೆಂಗಳೂರು, ದಿನಾಂಕ: 4ನೇ ನವೆಂಬರ್ 2009**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 10(5)ರ ಪ್ರಕಾರ ಡಾ. ಹೆಚ್.ವಿ ಚಂದ್ರಕುಮಾರ್ ಉಪನ್ಯಾಸಕರು, (ಅನಧಿಕೃತ ಗೈರುಹಾಜರಿಯಲ್ಲಿರುವ), ನೇತ್ರಚಿಕಿತ್ಸಾ ವಿಭಾಗ, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇವರನ್ನು ಅಮಾನತ್ತಿನಲ್ಲಿಟ್ಟಿದ್ದ ಸರ್ಕಾರಿ ಆದೇಶ ಸಂಖ್ಯೆ: ಆಕುಕ 45 ಕೆವಿಎಂ 2008 ದಿನಾಂಕ 30-08-2008ನ್ನು ಇವರಿಗೆ ಸಂಬಂಧಿಸಿದಂತೆ ಮಾತ್ರ ಹಿಂದಕ್ಕೆ ಪಡೆದು, ಇವರ ವಿರುದ್ಧದ ಶಿಸ್ತುಕ್ರಮವನ್ನು ಕೈಬಿಡಲಾಗಿದೆ.

ಡಾ. ಹೆಚ್.ವಿ. ಚಂದ್ರಕುಮಾರ್, ಉಪನ್ಯಾಸಕರು, (ಅನಧಿಕೃತ ಗೈರುಹಾಜರಿಯಲ್ಲಿರುವ), ನೇತ್ರಚಿಕಿತ್ಸಾ ವಿಭಾಗ, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ ಬೆಂಗಳೂರು ಇವರ ರಾಜೀನಾಮೆಯನ್ನು ಅವರು ಸರ್ಕಾರಿ ಕೆಲಸಕ್ಕೆ ಅನಧಿಕೃತ ಗೈರುಹಾಜರಾದ ದಿನಾಂಕ 24-04-2004ರಿಂದ ಜಾರಿಗೆ ಬರುವಂತೆ ಅಂಗೀಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶ್ರೀರಾಮರೆಡ್ಡಿ**

ಪಿ.ಆರ್. 2544

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ವೈದ್ಯಕೀಯ ಶಿಕ್ಷಣ.

**ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ**

**ಆದೇಶ ಸಂಖ್ಯೆ: ಪಸಂಮೀ 100 ಪಸಸೇ 2009, ಬೆಂಗಳೂರು, ದಿನಾಂಕ: 28ನೇ ಅಕ್ಟೋಬರ್ 2009**

**ವಿಷಯ:** ಬೆಳಗಾವಿ ಗ್ರಾಮೀಣ ಮತಕ್ಷೇತ್ರದ ಅರಳೀಕಟ್ಟೆ ಗ್ರಾಮಕ್ಕೆ ಮಂಜೂರಾದ ಪಶುಚಿಕಿತ್ಸಾಲಯವನ್ನು ಗಜಪತಿ ಗ್ರಾಮಕ್ಕೆ ಸ್ಥಳಾಂತರಿಸುವಿಕೆ.

**ಓದಲಾಗಿದೆ:** 1) ಆದೇಶ ಸಂಖ್ಯೆ: ಪಸಂಮೀ 217 ಪಸಸೇ 2007, ದಿನಾಂಕ: 31–08–2007

2) ಪತ್ರ ಸಂಖ್ಯೆ: ಆಪಸಂ/ಡಿವಿಡಿ–3/ಭಾಗ–2/2006–07 ದಿನಾಂಕ: 22–08–2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಆದೇಶದಲ್ಲಿ ಬೆಳಗಾವಿ ಜಿಲ್ಲೆ, ಬೆಳಗಾವಿ ತಾಲ್ಲೂಕಿನ ಅರಳೀಕಟ್ಟೆ ಗ್ರಾಮದಲ್ಲಿ ಹೊಸದಾಗಿ ಪಶುಚಿಕಿತ್ಸಾಲಯ ಪ್ರಾರಂಭಿಸಲು ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (2) ಪತ್ರದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಬೆಳಗಾಂ ಜಿಲ್ಲಾ ಉಪನಿರ್ದೇಶಕರು ಜಿಲ್ಲಾ ಪಂಚಾಯತ್ ನಿರ್ಣಯದಂತೆ ಬೆಳಗಾಂ ಗ್ರಾಮೀಣ ಮತಕ್ಷೇತ್ರದ ಅರಳೀಕಟ್ಟೆ ಗ್ರಾಮಕ್ಕೆ ಮಂಜೂರಾದ ಪಶುಚಿಕಿತ್ಸಾಲಯವನ್ನು ಸ್ಥಳಾಂತರಿಸುವಂತೆ ಅಭಿಪ್ರಾಯ ನೀಡಿರುವುದರಿಂದ, ಅರಳೀಕಟ್ಟೆ ಗ್ರಾಮಕ್ಕೆ ಮಂಜೂರಾದ ಪಶುಚಿಕಿತ್ಸಾಲಯವನ್ನು ಹುದ್ದೆಗಳ ಸಮೇತ ಗಜಪತಿ ಗ್ರಾಮಕ್ಕೆ ಸ್ಥಳಾಂತರಿಸುವ ಬಗ್ಗೆ ಆದೇಶ ಹೊರಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಬೆಳಗಾವಿ ಗ್ರಾಮೀಣ ಮತಕ್ಷೇತ್ರದ ಅರಳೀಕಟ್ಟೆ ಹಾಗೂ ಗಜಪತಿ ಗ್ರಾಮಗಳು ಪಶುಆಸ್ಪತ್ರೆ ಹಿರೇಬಾಗೇವಾಡಿ ವ್ಯಾಪ್ತಿಗೆ ಒಳಪಟ್ಟಿರುತ್ತದೆ. ರಾಷ್ಟ್ರೀಯ ಕೃಷಿ ಆಯೋಗದ ಶಿಫಾರಸ್ಸಿನಂತೆ ಹೊಸದಾಗಿ ಪಶುಚಿಕಿತ್ಸಾಲಯ ತೆರೆಯಲು ಉದ್ದೇಶಿಸಿರುವ ಸ್ಥಳ 5000 ಜಾನುವಾರು ಘಟಕಗಳನ್ನು ಹೊಂದಿರಬೇಕಾಗುತ್ತದೆ. ಅರಳೀಕಟ್ಟೆ ಗ್ರಾಮದಲ್ಲಿ 2000ಕ್ಕಿಂತ ಕಡಿಮೆ ಜಾನುವಾರುಗಳಿರುತ್ತವೆ. ಸದರಿ ಗ್ರಾಮ ಹಿರೇಬಾಗೇವಾಡಿ ಪಶುಆಸ್ಪತ್ರೆಯಿಂದ ಕೇವಲ 2 ಕಿ.ಮೀ ಅಂತರದಲ್ಲಿದ್ದು, ಪಶುಚಿಕಿತ್ಸಾಲಯ ಚಿಕ್ಕಬಾಗೇವಾಡಿಗೆ ಹತ್ತಿರದಲ್ಲಿದೆ. ಈ ಗ್ರಾಮಕ್ಕೆ ಹೊಂದಿಕೊಂಡಂತೆ ಯಾವುದೇ ಹಳ್ಳಿಗಳು ಇರುವುದಿಲ್ಲವಾದರಿಂದ, ಅರಳೀಕಟ್ಟೆ ಗ್ರಾಮಕ್ಕೆ ಹಿರೇಬಾಗೇವಾಡಿ ಪಶುಆಸ್ಪತ್ರೆ ಮತ್ತು ಪಶುಚಿಕಿತ್ಸಾಲಯ ಚಿಕ್ಕಬಾಗೇವಾಡಿಯಿಂದಲೇ ಪಶುವೈದ್ಯಕೀಯ ಸೇವೆಗಳನ್ನು ಪಡೆಯಲು ಅವಕಾಶವಿರುತ್ತದೆ. ಆದರೆ ಗಜಪತಿ ಗ್ರಾಮಕ್ಕೆ ಹೊಂದಿಕೊಂಡಂತೆ 5 ಕಿ.ಮೀ. ವ್ಯಾಪ್ತಿಯಲ್ಲಿ ಬಡಸ್ (ಕೆ.ಹೆಚ್) ಬೆಂಡಿಗೇರಿ ಕುಕಡೊಳ್ಳಿ, ಹುಲಿಕವಿ ಹಾಗೂ ಬಡಾಲ ಅಂಕಲಗಿ ಗ್ರಾಮಗಳು ಬರಲಿದ್ದು, 5000ಕ್ಕಿಂತ ಹೆಚ್ಚು ಜಾನುವಾರುಗಳನ್ನು ಹೊಂದಿದೆ. ಅಲ್ಲಿ ಪಶುವೈದ್ಯಕೀಯ ಸಂಸ್ಥೆ ಇಲ್ಲವಾದ್ದರಿಂದ ಕೇಂದ್ರ ಸ್ಥಾನದಲ್ಲಿರುವ ಗಜಪತಿ ಗ್ರಾಮದಲ್ಲಿ ಪಶುವೈದ್ಯಕೀಯ ಸಂಸ್ಥೆ ಸ್ಥಳಾಂತರಿಸಿದರೆ ಸುತ್ತಮುತ್ತಲಿನ ಗ್ರಾಮಗಳ ಜಾನುವಾರುಗಳಿಗೆ ಹಾಗೂ ರೈತರಿಗೆ ಪಶುವೈದ್ಯಕೀಯ ಸೇವೆಗಳನ್ನು ನೀಡಬಹುದಾಗಿದ್ದು ಅದರಿಂದ ಸರ್ಕಾರಕ್ಕೆ ಯಾವುದೇ ರೀತಿಯಲ್ಲೂ ಆರ್ಥಿಕವಾಗಿ ಹೊರೆಯಾಗುವುದಿಲ್ಲ. ಬೆಳಗಾವಿ ಜಿಲ್ಲಾ ಪಂಚಾಯತ್ ಈ ಸ್ಥಳಾಂತರಕ್ಕೆ ಅನುಮೋದನೆ ನೀಡಿರುತ್ತದೆ. ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿದ ರೈತಾಪಿ ವರ್ಗ ಹಾಗೂ ಜಾನುವಾರುಗಳ ಚಿಕಿತ್ಸಾ ದೃಷ್ಟಿಯಿಂದ ಅರಳೀಕಟ್ಟೆ ಗ್ರಾಮಕ್ಕೆ ಮಂಜೂರಾಗಿರುವ ಪಶುಚಿಕಿತ್ಸಾಲಯವನ್ನು ಗಜಪತಿ ಗ್ರಾಮಕ್ಕೆ ಸ್ಥಳಾಂತರಿಸಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ, ಈ ಆದೇಶ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ವಿವರಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆ, ಬೆಳಗಾವಿ ತಾಲ್ಲೂಕಿನ, ಬೆಳಗಾವಿ ಗ್ರಾಮೀಣ ಕ್ಷೇತ್ರದ ಅರಳೀಕಟ್ಟೆ ಗ್ರಾಮಕ್ಕೆ ಮಂಜೂರಾಗಿರುವ ಪಶುಚಿಕಿತ್ಸಾಲಯವನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಅದೇ ತಾಲ್ಲೂಕಿನ ಗಜಪತಿ ಗ್ರಾಮಕ್ಕೆ ಮಂಜೂರಾದ ಹುದ್ದೆಗಳ ಸಮೇತ ಸ್ಥಳಾಂತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ನಾಗರಾಜ**

ಪಿ.ಆರ್. 2546 ಪೀಠಾಧಿಕಾರಿ–2,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ, (ಪಶುಸಂಗೋಪನೆ–ಎ)

**ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ವಿಷಯ:** ಶ್ರೀ ಮೊಹಮ್ಮದ್ ಕಲೀಂ, ನೋಟರಿ, ರಾಯಚೂರು ಇವರ ರಾಜೀನಾಮೆ ಅಂಗೀಕರಿಸಿ ಹೆಸರನ್ನು ನೋಟರಿ ರಿಜಿಸ್ಟರ್‌ನಿಂದ ತೆಗೆಯುವ ಬಗ್ಗೆ.

**ಓದಲಾಗಿದೆ:** 1) ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ರಾಯಚೂರು ಇವರ ಪತ್ರ ಸಂಖ್ಯೆ 4203/ಆಡಳಿತ/ 2007 ದಿನಾಂಕ 13–09–2007, ಸಂಖ್ಯೆ 2658/ಎಡಿಎಂಎನ್/07 ದಿನಾಂಕ:17.06.2008 ಮತ್ತು ಸಂಖ್ಯೆ 998 ಆಡಳಿತ 2008 ದಿನಾಂಕ 18–11–2008.

2) ಸರ್ಕಾರದ ಪತ್ರ ಸಂಖ್ಯೆ ಲಾ 19 ಎಲ್‌ಸಿಎಲ್ 2007 ದಿನಾಂಕ: 23–05–2008, ಹಾಗೂ ಕಾರಣಕೇಳುವ ನೋಟೀಸ್ ಸಂಖ್ಯೆ ಲಾ 123 ಎಲ್‌ಸಿಎಲ್ 2008 ದಿನಾಂಕ: 25–10–2008 ಮತ್ತು 15–01–09

3) ಶ್ರೀ ಮೊಹಮ್ಮದ್ ಕಲೀಂ ನೋಟರಿ, ರಾಯಚೂರು ಇವರ ಮನವಿ ದಿನಾಂಕ: 13–02–2009.

4) ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ರಾಯಚೂರು ಇವರ ಪತ್ರ ಸಂಖ್ಯೆ 2451/ಎಡಿಎಂಎನ್ 09 ದಿನಾಂಕ: 30–05–2009.

**ಪ್ರಸ್ತಾವನೆ:**

ಶ್ರೀ ಮೊಹಮ್ಮದ್ ಕಲೀಂ, ನೋಟರಿ, ರಾಯಚೂರು ಇವರು 2005, 2006 ಮತ್ತು 2007ನೇ ಸಾಲುಗಳಲ್ಲಿ ಕರ್ತವ್ಯ ನಿರ್ವಹಣೆಯ ಬಗ್ಗೆ ನಿಯಮಾನುಸಾರ ರಿಟರ್ನ್ಸ್ ಹಾಗೂ ರಿಜಿಸ್ಟರ್ ತಪಾಸಣೆಗೊಳಪಡಿಸಿರುವುದಿಲ್ಲವೆಂದು ಹಾಗೂ ಈ ಬಗ್ಗೆ ನೋಟೀಸ್ ಸಹಾ ಜಾರಿ ಮಾಡಿರುವುದಾಗಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಮೇಲೆ (1)ರಲ್ಲಿ ಓದಲಾದ ಪತ್ರಗಳ ವರದಿಯನ್ವಯ ಸರ್ಕಾರದ ಹಂತದಲ್ಲಿಯೂ ಶ್ರೀಯುತರಿಂದ ಮೇಲೆ (2)ರಲ್ಲಿ ಓದಲಾದ ಪತ್ರಗಳಲ್ಲಿ ವಿವರಣೆಯನ್ನು ಕೋರಲಾಗಿತ್ತು.

ಅದರಂತೆ ಮೇಲೆ (3)ರಲ್ಲಿ ಓದಲಾದ ದಿನಾಂಕ: 13–02–2009ರಂದು ನೋಟರಿಯವರು ಮನವಿ ಸಲ್ಲಿಸಿ, ಅನಾರೋಗ್ಯದ ನಿಮಿತ್ತ 2005ರಿಂದ ನೋಟರಿ ಕರ್ತವ್ಯ ನಿರ್ವಹಿಸುತ್ತಿಲ್ಲ ಹಾಗೂ ನವೀಕರಣ ಪ್ರಮಾಣ ಪತ್ರ ನೀಡುವಂತೆಯೂ ಸಹ ಕೋರಿಲ್ಲವೆಂದು ತಿಳಿಸಿ ತಮ್ಮ ವಿರುದ್ಧ ಹೂಡಲು ನಿದೇಶಿಸಿರುವ ಕ್ರಮವನ್ನು ಕೈಬಿಡಬೇಕೆಂದು ಕೋರಿರುತ್ತಾರೆ. ಹಾಗೂ ದಿನಾಂಕ 29–05–2009ರ ರಾಜೀನಾಮೆ ಪತ್ರವನ್ನು ಮೇಲೆ (4) ರಲ್ಲಿ ಓದಲಾದ ದಿನಾಂಕ: 30.05.2009ರ ಪತ್ರದೊಂದಿಗೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ರಾಯಚೂರು ಇವರಿಂದ ಸ್ವೀಕರಿಸಲಾಗಿದೆ.

ಸರ್ಕಾರವು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ರಾಯಚೂರು ಇವರ ಪ್ರಸ್ತಾವನೆ ಹಾಗೂ ನೋಟರಿಯವರ ಮನವಿಗಳನ್ನು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಲಾ 123 ಎಲ್‌ಸಿಎಲ್ 2008, ಬೆಂಗಳೂರು, ದಿನಾಂಕ: 6ನೇ ನವೆಂಬರ್ 2009**

ಶ್ರೀ ಮೊಹಮ್ಮದ್ ಕಲೀಂ, ನೋಟರಿ, ರಾಯಚೂರು ಇವರ ರಾಜೀನಾಮೆಯನ್ನು ಅಂಗೀಕರಿಸಿ ಶ್ರೀಯುತರ ಹೆಸರನ್ನು ನೋಟರಿ ಕಾಯ್ದೆ 1952ರ ಕಲಂ 10(ಎ)(ಬಿ)(ಸಿ)(ಎಫ್) ರೀತ್ಯ ನೋಟರಿ ರಿಜಿಸ್ಟರ್‌ನಿಂದ ಶಾಶ್ವತವಾಗಿ ತೆಗೆದುಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಶಕುಂತಲ ಹೆಚ್.ಆರ್**

ಪಿ.ಆರ್. 2549

ಸರ್ಕಾರದ ಅಧೀನ ಕಾರ್ಯದರ್ಶಿ(ಆಡಳಿತ– 2)

ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಲಾಲ್‌ಸಿಂಗ್ ನಾಯಕ್, ಹಿಂದಿನ ತಹಶೀಲ್ದಾರ್, ಕುಷ್ಟಗಿ ತಾಲ್ಲೂಕು, ಪ್ರಸ್ತುತ ನಿವೃತ್ತ ತಹಶೀಲ್ದಾರ್ ಇವರ ವಿರುದ್ಧ ಲೋಕಾಯುಕ್ತ ಟ್ರ್ಯಾಪ್ ಕುರಿತು.

**ಓದಲಾಗಿದೆ:** ಅವರ ನಿಬಂಧಕರು, ವಿಚಾರಣೆಗಳು–6, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಅ.ಸ.ಪ.ಸಂ: ಕಂಪ್ಲೆಂಟ್/ಉಪಲೋಕ್/ಜಿಎಲ್‌ಬಿ–498/2006/ಎಆರ್‌ಇ–6, ದಿನಾಂಕ: 03–08–2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ(1) ದಿನಾಂಕ: 03–08–2009ರಲ್ಲಿ ಅಪರ ನಿಬಂಧಕರು. ವಿಚಾರಣೆಗಳು–6, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಗೌರವಾನ್ವಿತ ಉಪಲೋಕಾಯುಕ್ತ ವರದಿಯಲ್ಲಿ, ಶ್ರೀ ಲಾಲ್‌ಸಿಂಗ್ ನಾಯಕ್, ಹಿಂದಿನ ತಹಶೀಲ್ದಾರ್, ಕುಷ್ಟಗಿ ತಾಲ್ಲೂಕು, ಪ್ರಸ್ತುತ ನಿವೃತ್ತ ತಹಶೀಲ್ದಾರ್ ಇವರು ಫಿರ್ಯಾದುದಾರರಾದ ಶ್ರೀ ರಾಮಪ್ಪ ಬಿನ್ ಮರಿಯಪ್ಪ ಸಂಡೂರ ಮತ್ತು ಅವರ 8 ಮಂದಿ ದಾಯಾಧಿಗಳಿಗೆ ಕುಷ್ಟಗಿ ತಾಲ್ಲೂಕಿನ ಹಿರೇತಮ್ಮಿನಾಳ ಗ್ರಾಮದ ಸ.ನಂ:95 ರಲ್ಲಿ 27.13 ಎಕರೆ–ಗುಂಟೆ ಜಮೀನನ್ನು ಅಕ್ರಮ–ಸಕ್ರಮ ಯೋಜನೆಯಡಿಯಲ್ಲಿ ಜಮೀನು ಮಂಜೂರು ಮಾಡಲು ರೂ.15,000/–ಗಳ ಅಕ್ರಮ ಸಂಭಾವನೆಯನ್ನು ದಿನಾಂಕ: 08–12–2005ರಂದು ರಾತ್ರಿ 8–00 ಗಂಟೆಯ ಸಮಯದಲ್ಲಿ ತಮ್ಮ ಮನೆಯಲ್ಲಿ ಸ್ವೀಕರಿಸುತ್ತಿದ್ದಾಗ ಲೋಕಾಯುಕ್ತರ ಬಲೆಗೆ ಲಂಚದ ಹಣದೊಂದಿಗೆ ಸಿಕ್ಕಿಬಿದ್ದಿರುವುದರಿಂದ ಅವರ ವಿರುದ್ಧ ಭ್ರಷ್ಟಾಚಾರದ ಆಪಾದನೆ ಸಾಬೀತಾಗಿರುವುದಾಗಿ ತಿಳಿಸಿ, ಕರ್ನಾಟಕ ಲೋಕಾಯುಕ್ತ ಅಧಿನಿಯಮ 1984ರ ಸೆಕ್ಷನ್ 7(2)ರಡಿಯಲ್ಲಿ ಮಾನ್ಯ ಉಪಲೋಕಾಯಕ್ತರು ಸ್ವಯಂ ಪ್ರೇರಿತ ವಿಚಾರಣೆ ನಡೆಸಿ, ಪ್ರಾಥಮಿಕ ವಿಚಾರಣಾ ವರದಿಯನ್ನು ಸಂಬಂಧಿಸಿದ ದಾಖಲಾತಿಗಳೊಂದಿಗೆ ಸರ್ಕಾರಕ್ಕೆ ಕಳುಹಿಸಿ ಈ ಕುರಿತು ಅಪಾದಿತ ಅಧಿಕಾರಿಯಾದ ಶ್ರೀ ಲಾಲ್‌ಸಿಂಗ್ ನಾಯಕ್, ತಹಶೀಲ್ದಾರ್ ಇವರ ವಿವರಣೆ ಪಡೆದಿದ್ದು, ಸದರಿ ವಿವರಣೆಯು ಒಪ್ಪಲು ಬರುವುದಿಲ್ಲವಾದ್ದರಿಂದ ಹಾಗೂ

ಶ್ರೀ ಲಾಲ್‌ಸಿಂಗ್ ನಾಯಕ್, ಹಿಂದಿನ ತಹಶೀಲ್ದಾರ್ ಕುಷ್ಟಗಿ ತಾಲ್ಲೂಕು ಇವರು ಈಗಾಗಲೇ ದಿನಾಂಕ: 30–06–2006ರಂದು ಸರ್ಕಾರಿ ಸೇವೆಯಿಂದ ವಯೋ ನಿವೃತ್ತಿ ಹೊಂದಿರುವುದರಿಂದ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರಡಿಯಲ್ಲಿ ಹಾಗೂ ಕೆ.ಸಿ.ಎಸ್ (ಸಿಸಿಎ) ನಿಯಮಾವಳಿಗಳು 1957ರ ನಿಯಮ 14(ಎ)ರನ್ವಯ ಮಾನ್ಯ ಉಪಲೋಪಾಯಕ್ತರಿಗೆ ವಹಿಸುವಂತೆ ಕೋರಿರುತ್ತಾರೆ. ಅದರಂತೆ, ಸರ್ಕಾರವು ಈ ಪ್ರಕರಣದ ಕುರಿತು ಇಲಾಖಾ ವಿಚಾರಣೆಯನ್ನು ಮಾನ್ಯ ಉಪಲೋಕಾಯುಕ್ತರಿಗೆ ವಹಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಕಂಇ 63 ಎಡಿಇ 2005, ಬೆಂಗಳೂರು, ದಿನಾಂಕ: 4ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಸರ್ಕಾರವು ಈ ಪ್ರಕರಣದಲ್ಲಿ ಭಾಗಿಯಾಗಿರುವ ಶ್ರೀ ಲಾಲ್‌ಸಿಂಗ್ ನಾಯಕ್, ಹಿಂದಿನ ತಹಶೀಲ್ದಾರ್, ಕುಷ್ಟಗಿ ತಾಲ್ಲೂಕು, ಪ್ರಸ್ತುತ ನಿವೃತ್ತ ತಹಶೀಲ್ದಾರ್ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರಡಿಯಲ್ಲಿ ಪ್ರದತ್ತವಾದ ಅಧಿಕಾರದನ್ವಯ ಹಾಗೂ ಕೆ.ಸಿ.ಎಸ್ (ಸಿಸಿಎ) ನಿಯಮಾವಳಿಗಳು 1957ರ ನಿಯಮ 14(ಎ)ರನ್ವಯ ಮಾನ್ಯ ಉಪಲೋಕಾಯಕ್ತರು, ಬೆಂಗಳೂರು ಇವರಿಗೆ ವಹಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2553

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಎ.ವಿ. ನಾಗರಾಜ, ದ್ವಿತೀಯ ದರ್ಜೆ ಭೂಮಾಪಕರು ರವರ ಕರ್ತವ್ಯ ನಿರ್ಲಕ್ಷ್ಯ ಮತ್ತು ಅನಧಿಕೃತ ಗೈರು ಹಾಜರಿ ವಿರುದ್ಧ ಶಿಸ್ತುಕ್ರಮದ ಆರೋಪದ ಕುರಿತು ಇಲಾಖಾ ವಿಚಾರಣೆ.

**ಓದಲಾಗಿದೆ:**
1. ಜಿಲ್ಲಾಧಿಕಾರಿ, ಚಿಕ್ಕಮಗಳೂರು ಜಿಲ್ಲೆ ಇವರ ಪತ್ರ ಸಂ.ಇಎಸ್‌ಟಿ(1)ಸಿಸಿಎ:02:07–08 ದಿನಾಂಕ:17.4.2008 ಮತ್ತು 23.5.2008.
2. ಸರ್ಕಾರದ ಪತ್ರ ಸಂ.ಕಂಇ 62 ಭೂದಾಸೇ(3) 2008 ದಿನಾಂಕ 13.11.2008.
3. ಜಿಲ್ಲಾಧಿಕಾರಿ ಚಿಕ್ಕಮಗಳೂರು ಇವರ ಪತ್ರ ಸಂ.ಇಎಸ್‌ಟಿ(1)ಸಿಸಿಎ02/2007–08 ದಿನಾಂಕ:2.4.2009.
4. ಸರ್ಕಾರದ ಪತ್ರ ಸಂ.ಕಂಇ 62 ಭೂದಾಸೇ(3) 2008 ದಿನಾಂಕ 24.6.2009 ಮತ್ತು 1.7.2009.
5. ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ ಇವರ ಪತ್ರ ಸಂ.PSC 77 CNS 09 ದಿನಾಂಕ:19.8.2009.

**ಪ್ರಸ್ತಾವನೆ:**

ಶ್ರೀ ಎ.ವಿ.ನಾಗರಾಜ್, ನಿವೃತ್ತ, ದ್ವಿತೀಯ ದರ್ಜೆ ಭೂಮಾಪಕರು, ಇವರು ಹಿಂದೆ ತಾಲ್ಲೂಕು ಭೂಮಾಪನ ಕಛೇರಿ, ಶೃಂಗೇರಿ, ಚಿಕ್ಕಮಗಳೂರು ಜಿಲ್ಲೆ ಇಲ್ಲಿ ದ್ವಿತೀಯ ದರ್ಜೆ ಭೂಮಾಪಕರು ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ 12–9–2005 ರಿಂದ 13–3–2007ರವರೆಗೆ ಒಟ್ಟು 298 ದಿನಗಳು ಕಛೇರಿ ಮುಖ್ಯಸ್ಥರಿಂದ ರಜೆಯ ಬಗ್ಗೆ ಪೂರ್ವಾನುಮತಿ ಪಡೆಯದೆ ಕಛೇರಿ ಕೆಲಸಕ್ಕೆ ಅನಧಿಕೃತ ಗೈರು ಹಾಜರಾಗಿ ಕರ್ತವ್ಯಲೋಪ ಎಸಗಿದ ಪ್ರಕರಣದ ಬಗ್ಗೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಸಲ್ಲಿಸಿದ ವಿಚಾರಣಾ ವರದಿಯ ದಾಖಲೆಗಳೊಂದಿಗೆ ಮುಂದಿನ ಶಿಸ್ತು ಕ್ರಮಕ್ಕಾಗಿ, ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ ರವರು ಮೇಲೆ(1)ರಲ್ಲಿ ಓದಲಾದ ಪತ್ರಗಳಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದರು.

ವಿಚಾರಣಾ ವರದಿಯಲ್ಲಿ ವಿಚಾರಣಾಧಿಕಾರಿಗಳು ಆರೋಪಿತ ನೌಕರರು ಪದೇ ಪದೇ ಸರ್ಕಾರಿ ಕೆಲಸಕ್ಕೆ ವಿವಿಧ ದಿನಾಂಕಗಳಂದು ಸುಮಾರು 298 ದಿನಗಳಿಗಿಂತಲೂ ಹೆಚ್ಚಾಗಿ ಗೈರು ಹಾಜರಾಗಿರುವುದು ನಿಜವಾಗಿರುತ್ತದೆ ಎಂದು ವರದಿ ನೀಡಿರುತ್ತಾರೆ. ಅದರಂತೆ ಸರ್ಕಾರದ ಮೇಲೆ(2)ರಲ್ಲಿ ಓದಲಾದ ದಿನಾಂಕ: 13–11–2008ರ ಪತ್ರದಲ್ಲಿ ಎರಡನೇ ಕಾರಣ ಕೇಳುವ ನೋಟೀಸ್ ಅನ್ನು ಆಪಾದಿತ ನೌಕರರಿಗೆ ಜಾರಿಮಾಡುವ ಬಗ್ಗೆ ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಇವರನ್ನು ಕೋರಲಾಗಿತ್ತು. ಮೇಲೆ(3)ರಲ್ಲಿ ಓದಲಾದ ದಿನಾಂಕ: 2–4–2009ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು ಆಪಾದಿತ ನೌಕರರಿಂದ ಎರಡನೇ ಕಾರಣ ಕೇಳುವ ನೋಟೀಸಿಗೆ ಸಂಬಂಧಿಸಿದಂತೆ ಪಡೆದ ಸಮಜಾಯಿಷಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದಾರೆ.

ಆಪಾದಿತ ನೌಕರರು ನೀಡಿರುವ ಲಖಿತ ಸಮಜಾಯಿಷಿಯಲ್ಲಿ ಅವರ ಮೇಲಿನ ಆರೋಪಗಳನ್ನು ಅಲ್ಲಗಳೆದಿದ್ದಾರೆ. ಅವರ ಹೇಳಿಕೆಯಂತೆ "ನಾನು ದಿನಾಂಕ: 31–8–2007ರಂದು ಸರ್ಕಾರಿ ಸೇವೆಯಿಂದ ನಿವೃತ್ತಿ ಹೊಂದಿರುತ್ತೇನೆ. ನಾನು ಸೇವೆಯಲ್ಲಿದ್ದ ಸಮಯದಲ್ಲಿ ಆಗಿಂದಾಗ್ಗೆ ರಜಾ ಅರ್ಜಿಯನ್ನು ಸಲ್ಲಿಸಿ ಕೇಂದ್ರಸ್ಥಾನವನ್ನು ಬಿಟ್ಟಿದ್ದು, ಅದರ ನಂತರ ಅಂಚೆಮುಖಾಂತರ ರಜಾ ಅರ್ಜಿಯನ್ನು ಕಳುಹಿಸಿರುತ್ತೇನೆ. ರಜಾ ಮುಂದುವರೆಸಿದ್ದೇನೆ. ನಾನು ಯಾವ ರೀತಿಯಿಂದಲೂ ಅನಧಿಕೃತವಾಗಿ ಗೈರು ಹಾಜರಾಗಿರುವುದಿಲ್ಲ. ಗೈರು ಹಾಜರಾದ ಅವಧಿಗೆ ವೈದ್ಯಕೀಯ ಪ್ರಮಾಣ ಪತ್ರವನ್ನು ಸಲ್ಲಿಸಿರುತ್ತೇನೆ. ಈ ಮೇಲೆ ಹೇಳಲಾದ ಅವಧಿಗೆ ಕರ್ತವ್ಯದ ಅವಧಿ ಎಂದು ಪರಿಗಣಿಸಿ ನನಗೆ ಸರ್ಕಾರದಿಂದ ಸಿಗಬೇಕಾದ ವೇತನ ಇತರೆ ಸೌಲಭ್ಯಗಳನ್ನು ಮಂಜೂರು ಮಾಡಿಕೊಡಬೇಕೆಂದು ಕೇಳಿಕೊಳ್ಳುತ್ತೇನೆ". ಎಂದು ಸಮಜಾಯಿಷಿ ನೀಡಿರುತ್ತಾರೆ.

ವಿಚಾರಣಾ ವರದಿ ಮತ್ತು ಲಭ್ಯವಿರುವ ದಾಖಲೆಗಳನ್ನು ಹಾಗೂ ಆರೋಪಿತ ನೌಕರರು 2ನೇ ಕಾರಣ ಕೇಳುವ ನೋಟೀಸಿಗೆ ನೀಡಿರುವ ಹೇಳಿಕೆಗಳನ್ನು ಸರ್ಕಾರವು ಕೂಲಂಕಶವಾಗಿ ಪರಿಶೀಲಿಸಿದೆ. ಆರೋಪಗಳನ್ನು ಅಲ್ಲಗಳೆಯುವಂತಹ ಸಾಕ್ಷಿ ಪುರಾವೆಗಳನ್ನು ಒದಗಿಸಿರುವುದಿಲ್ಲವಾದ್ದರಿಂದ ವಿಚಾರಣೆಯನ್ನು ವಿಚಾರಣಾಧಿಕಾರಿಗಳು ನಿಯಮಾನುಸಾರ ನಡೆಸಿರುವುದನ್ನು ಮನಗಂಡು ಹಾಗೂ ವಿಚಾರಣಾ ವರದಿಯ ಬಗ್ಗೆ ಆರೋಪಿತ ನೌಕರರು ನೀಡಿರುವ ಹೇಳಿಕೆಗಳನ್ನು ತಿರಸ್ಕರಿಸಿ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಶ್ರೀ ಎ.ವಿ.ನಾಗರಾಜ್, ನಿವೃತ್ತ ದ್ವಿತೀಯ ದರ್ಜೆ ಭೂಮಾಪಕರು, ಇವರ ಮೇಲಿನ ಆರೋಪವು ವಿಚಾರಣೆಯಿಂದ ಸಾಬೀತಾಗಿರುವುದರಿಂದ ಇವರ ನಿವೃತ್ತಿ ವೇತನದಲ್ಲಿ ಮಾಹೆಯಾನ ಶೇ.5%ರಷ್ಟು ಖಾಯಂ ಆಗಿ ಕಡಿತಗೊಳಿಸುವ ದಂಡನೆ ವಿಧಿಸಲು ನಿರ್ಧರಿಸಿ, ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಮೇಲೆ (4)ರಲ್ಲಿ ಓದಲಾದ ದಿನಾಂಕ 11–7–2009ರ ಪತ್ರದಲ್ಲಿ ಕೋರಲಾಗಿತ್ತು. ಅದರಂತೆ ಕರ್ನಾಟಕ ಲೋಕಸೇವಾ ಆಯೋಗವು ಮೇಲೆ(5) ರಲ್ಲಿ ಓದಲಾದ ದಿನಾಂಕ 19–8–2009ರ ಪತ್ರದಲ್ಲಿ ಶ್ರೀ ಎ.ವಿ.ನಾಗರಾಜ್, ನಿವೃತ್ತ ದ್ವಿತೀಯ ದರ್ಜೆ ಭೂಮಾಪಕರು, ಇವರ ನಿವೃತ್ತಿ ವೇತನದಲ್ಲಿ ಮಾಹೆಯಾನ ಶೇಕಡ 5%ರಷ್ಟು ಖಾಯಂ ಆಗಿ ಕಡಿತಗೊಳಿಸಬೇಕೆಂಬ ಸರ್ಕಾರದ ಪ್ರಸ್ತಾವನೆಗೆ ಸಹಮತಿ ನೀಡಿರುತ್ತಾರೆ.

ಈ ಹಿನ್ನಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಸಂ.ಕಂಇ 62 ಭೂದಾಸೇ(3) 2008, ಬೆಂಗಳೂರು, ದಿನಾಂಕ: 28ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಎ.ವಿ.ನಾಗರಾಜ, ನಿವೃತ್ತ ದ್ವಿತೀಯ ದರ್ಜೆ ಭೂಮಾಪಕರು, ಇವರು ತಾಲ್ಲೂಕು ಭೂಮಾಪನ ಕಛೇರಿ, ಶೃಂಗೇರಿ, ಚಿಕ್ಕಮಗಳೂರು ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಎಸಗಿದ ಕರ್ತವ್ಯ ಲೋಪದ ಆರೋಪವು ಸಾಬೀತಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 241(1)(ಎ) ರನ್ವಯ ಇವರಿಗೆ ದೊರೆಯಬಹುದಾದ ನಿವೃತ್ತಿ ವೇತನದಲ್ಲಿ ಮಾಹೆಯಾನ ಶೇ.5%ರಷ್ಟನ್ನು (ಶೇಕಡ ಐದರಷ್ಟು ಮಾತ್ರ) ಖಾಯಂ ಆಗಿ ತಕ್ಷಣದಿಂದ ಜಾರಿಗೆ ಬರುವಂತೆ ಕಡಿತಗೊಳಿಸಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2554

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ ಕಂದಾಯ ಇಲಾಖೆ, (ಭೂಮಾಪನ).

**ವಿಷಯ:** 2009–10ನೇ ಸಾಲಿನಲ್ಲಿ ಭಾರಿ ಮಳೆ ಹಾಗೂ ಪ್ರವಾಹದಿಂದ ಆಗಿರುವ ಹಾನಿಗಳಿಗೆ ತುರ್ತು ಪರಿಹಾರ ಕ್ರಮ ಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲಾಧಿಕಾರಿಗಳಿಂದ ಬಂದಿರುವ ಬೇಡಿಕೆ.

**ಪ್ರಸ್ತಾವನೆ:**

2009–10ನೆ ಸಾಲಿನಲ್ಲಿ ಬಿದ್ದ ಮಳೆ ಹಾಗೂ ಪ್ರವಾಹದಿಂದ ಉಡುಪಿ ಹಾಗೂ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮೂಲಭೂತ ಸೌಕರ್ಯಗಳಿಗೆ ಹಾನಿ ಉಂಟಾಗಿರುವುದಕ್ಕೆ ತುರ್ತು ದುರಸ್ತಿ/ಪರಿಹಾರ ಕಾರ್ಯಕೈಗೊಳ್ಳಲು ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳ ಜಿಲ್ಲಾಧಿಕಾರಿಗಳು, ಅನುದಾನ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಜಿಲ್ಲಾಧಿಕಾರಿಗಳ ಕೋರಿಕೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಹಣ ಬಿಡುಗಡೆ ಮಾಡಲು ತೀರ್ಮಾನಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 461 ಟಿಎನ್ಆರ್ 2007, ಬೆಂಗಳೂರು, ದಿನಾಂಕ: 2ನೇ ನವೆಂಬರ್ 2009**

ಪ್ರ.ಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಮಳೆ ಹಾಗೂ ಪ್ರವಾಹದಿಂದ ಮೂಲಭೂತ ಸೌಕರ್ಯಗಳಾದ ರಸ್ತೆ, ಸೇತುವೆ, ಮುಂತಾದವುಗಳಿಗೆ ಆಗಿರುವ ಹಾನಿಗಳಿಗೆ ತುರ್ತು ದುರಸ್ತಿ/ಪರಿಹಾರ ಕಾರ್ಯಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಕೆಳಕಂಡತೆ ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

| ಕ್ರ.ಸಂ | ಜಿಲ್ಲೆಯ ಹೆಸರು | ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|
| 1 | ಉಡುಪಿ | 500.00 |
| 2 | ದಕ್ಷಿಣ ಕನ್ನಡ | 500.00 |
| | **ಒಟ್ಟು** | **1000.00** |

(ರೂಪಾಯಿ ಒಂದು ಸಾವಿರ ಲಕ್ಷ ರೂ.ಗಳು ಮಾತ್ರ)

1) ಮೇಲಿನಂತೆ ಬಿಡುಗಡೆ ಮಾಡಿದ ಹಣವನ್ನು ಹಾನಿಗೊಳಗಾದ ಮೂಲಭೂತ ಸೌಕರ್ಯಗಳಿಗೆ ತುರ್ತು ದುರಸ್ತಿ/ಪರಿಹಾರ ಕಾರ್ಯಗಳಿಗೆ ಉಪಯೋಗಿಸುವುದು.

2) ಕೇಂದ್ರ ಸರ್ಕಾರವು ಹೊರಡಿಸಿರುವ ಮಾರ್ಗಸೂಚಿಗಳ ಪ್ರಕಾರ ವೆಚ್ಚ ಮಾಡುವುದು.

3) ಅನುದಾನ ಲಭ್ಯತೆ ಇಲ್ಲದೇ ಯಾವುದೇ ದುರಸ್ತಿ ಕಾಮಗಾರಿಗಳನ್ನು ಸಿಆರ್‌ಎಫ್/ಎನ್‌ಸಿಸಿಎಫ್ ಅಡಿಯಲ್ಲಿ ಕೈಗೊಳ್ಳುವಂತಿಲ್ಲ. ಹಾಗೂ ಕಾಮಗಾರಿಗಳನ್ನು ಬಿಡುಗಡೆಯಾದ ಅನುದಾನಕ್ಕೆ ಸೀಮಿತಗೊಳಿಸುವುದು. ಈ ಷರತ್ತು ಪ್ರವಾಹ ಪೀಡಿತ ಜಿಲ್ಲೆಗಳಲ್ಲಿ ಸಿಆರ್‌ಎಫ್/ಎನ್‌ಸಿಸಿಎಫ್ ನಾರ್ಮ್ಸ್ ಪ್ರಕಾರ 30 ದಿವಸ ಹಾಗೂ 45 ದಿವಸಗಳಲ್ಲಿ ಕೈಗೊಳ್ಳುವ ಕಾಮಗಾರಿಗಳಿಗೆ ಅನ್ವಯಿಸುವುದಿಲ್ಲ.

4) ಪ್ರಕೃತಿ ವಿಕೋಪದಿಂದ ಆದಂತಹ ವಿಪತ್ತು ಹಾನಿಗೆ ಮಾತ್ರ ಪರಿಹಾರ ನೀಡುವುದು.

5) ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು ಪೇಯಿಡ್ ರಸೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಸಿ.ಆರ್.ಎಫ್. ಪಿ.ಡಿ.ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದ್ದು.

6) ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಲೆಕ್ಕ ಶೀರ್ಷಿಕೆ 2245–02–110–0–01–100(ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

7) ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

8) ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 692 ವೆಚ್ಚ–7/2009 (ಭಾ) ದಿನಾಂಕ:06.10.2009ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಾಮಚಂದ್ರಯ್ಯ**

ಪಿ.ಆರ್. 2555 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ, (ವಿಪತ್ತು ನಿರ್ವಹಣೆ ಮತ್ತು ಸೇವೆಗಳು – 2)

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ:** ಶಾಸಕರ ಪ್ರದೇಶಾಭಿವೃದ್ಧಿ ಯೋಜನೆಯಡಿಯಲ್ಲಿ 2007–08ನೇ ಸಾಲಿನಲ್ಲಿ ವಿಧಾನ ಪರಿಷತ್ ಸದಸ್ಯರಿಗೆ ಅನುದಾನ ಮರು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: ಯೋಇ 37 ಯೋವಿವಿ 2007 ದಿನಾಂಕ 19–03–2008

**ಪ್ರಸ್ತಾವನೆ:**

ಶಾಸಕರ ಪ್ರದೇಶಾಭಿವೃದ್ಧಿ ಯೋಜನೆಯಡಿ 2007–08ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ "2575–60–265–0–02–059 (ಯೋಜನೇತರ)" ಅಡಿಯಲ್ಲಿ ರೂ.300.00ಕೋಟಿಗಳನ್ನು (ಮೂರುನೂರು ಕೋಟಿಗಳನ್ನು) ಒದಗಿಸಲಾಗಿದ್ದು, ಇದರಲ್ಲಿ ಕಾರ್ಯಕ್ರಮದ ಅನುಷ್ಠಾನಕ್ಕಾಗಿ ಕೊನೆಯ ಕಂತಾಗಿ ತಲಾ ರೂ.50.00ಲಕ್ಷಗಳಂತೆ ಒಟ್ಟು ರೂ.34.50ಕೋಟಿಗಳನ್ನು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಬಿಡುಗಡೆ ಮಾಡಲಾಗಿದೆ.

2007–08ನೇ ಸಾಲಿನಲ್ಲಿ ಬಿಡುಗಡೆ ಮಾಡಿದ ಕೊನೆಯ ಕಂತಿನ ಅನುದಾನವನ್ನು ದಕ್ಷಿಣ ಕನ್ನಡ ಜಿಲ್ಲೆ ಜಿಲ್ಲಾಧಿಕಾರಿಗಳ ದಿನಾಂಕ: 01–04–2008ರ ಪತ್ರದಲ್ಲಿ ಅನುದಾನವು ಪಿ.ಡಿ.ಖಾತೆಗೆ ಹೊಂದಾಣಿಕೆ ಮಾಡಲು ಆಗಿಲ್ಲವಾದ್ದರಿಂದ ದಕ್ಷಿಣ ಕನ್ನಡ ಜಿಲ್ಲೆ ವಿಧಾನ ಪರಿಷತ್ ಸದಸ್ಯರುಗಳಾದ ಶ್ರೀಮತಿ ಶೋಭಾ ಕರಂದ್ಲಾಜೆ ಮತ್ತು ಶ್ರೀ ಗಣೇಶ್ ಕಾರ್ಣಿಕ್‌ರವರಿಗೆ ಅನುದಾನವನ್ನು ಮರು ಬಿಡುಗಡೆ ಮಾಡುವಂತೆ ಕೋರಿದ್ದ ಹಿನ್ನೆಲೆಯಲ್ಲಿ ಆರ್ಥಿಕ ಇಲಾಖೆಯ ದಿನಾಂಕ:20–10–2009ರ ಹಿಂಬರಹ ಸಂಖ್ಯೆ: ಆಇ 467 ವೆಚ್ಚ–6/2009ರಲ್ಲಿ ಸಹಮತಿಸಿರುವುದರಿಂದ ಈ ಕೆಳಗೆ ನಮೂದಿಸಿರುವ ಮಾನ್ಯ ವಿಧಾನ ಪರಿಷತ್ ಸದಸ್ಯರಿಗೆ ತಲಾ ರೂ.50.00ಲಕ್ಷಗಳಂತೆ ಒಟ್ಟು ರೂ.100.00ಲಕ್ಷಗಳನ್ನು ಬಿಡುಗಡೆ ಮಾಡಲು ಉದ್ದೇಶಿಸಲಾಗಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಯೋಇ 94 ಯೋವಿವಿ 2009, ಬೆಂಗಳೂರು, ದಿನಾಂಕ: 31ನೇ ಅಕ್ಟೋಬರ್ 2009**

ಶಾಸಕರ ಪ್ರದೇಶಾಭಿವೃದ್ಧಿ ಯೋಜನೆಯಡಿಯಲ್ಲಿ 2007–08ನೇ ಸಾಲಿನ ಅನುದಾನವನ್ನು ಈ ಕೆಳಕಂಡ ದಕ್ಷಿಣ ಕನ್ನಡ ಜಿಲ್ಲೆಯ ಮಾನ್ಯ ವಿಧಾನ ಪರಿಷತ್ ಸದಸ್ಯರುಗಳಿಗೆ ತಲಾ ರೂ.50.00ಲಕ್ಷಗಳಂತೆ ಒಟ್ಟು ರೂ.100.00ಲಕ್ಷಗಳನ್ನು ಮರು ಬಿಡುಗಡೆ ಮಾಡಲಾಗಿದೆ.

| ಕ್ರಮ ಸಂಖ್ಯೆ | ವಿಧಾನ ಪರಿಷತ್ತಿನ ಸದಸ್ಯರುಗಳ ಹೆಸರು (ಶ್ರೀ/ಶ್ರೀಮತಿ) | ಜಿಲ್ಲೆಯ ಹೆಸರು | ರೂ. ಲಕ್ಷಗಳಲ್ಲಿ |
|---|---|---|---|
| ದಕ್ಷಿಣ ಕನ್ನಡ ಜಿಲ್ಲೆ | | | |
| 1. | ಶ್ರೀಮತಿ ಶೋಭಾ ಕರಂದ್ಲಾಜೆ | ದಕ್ಷಿಣ ಕನ್ನಡ | 50.00 |
| 2. | ಶ್ರೀ ಗಣೇಶ್ ಕಾರ್ಣಿಕ್ | ದಕ್ಷಿಣ ಕನ್ನಡ | 50.00 |
| | | ಒಟ್ಟು | **100.00** |

2) ಈ ಬಿಡುಗಡೆಯಾದ ಮೊತ್ತಕ್ಕೆ ಜಿಲ್ಲಾಧಿಕಾರಿಗಳು ಆಯಾ ಶಾಸಕರಿಂದ ಕ್ರಿಯಾ ಯೋಜನೆಯನ್ನು ಪಡೆದು ಸರ್ಕಾರದ ಆದೇಶ ಸಂಖ್ಯೆ: ಪಿಡಿ 486 ಪಿಎಂಎಂ 2001, ದಿನಾಂಕ: 16–7–2001ರಲ್ಲಿ, ಹಾಗೂ ತದನಂತರ ಹೊರಡಿಸಿದ ಪರಿಷ್ಕೃತ ಮಾರ್ಗಸೂಚಿಗಳಲ್ಲಿ ನೀಡಿರುವ ಸೂಚನೆಗಳಂತೆ ಅನುಷ್ಠಾನಗೊಳಿಸತಕ್ಕದ್ದು.

3) ನಿಯಮಾನುಸಾರ ಹಣ ಬಳಕೆ ದೃಢೀಕರಣದ ಪತ್ರವನ್ನು ಜಿಲ್ಲಾಧಿಕಾರಿಗಳ ಮೇಲು ಸಹಿಯೊಂದಿಗೆ ಸರ್ಕಾರಕ್ಕೆ ಸಲ್ಲಿಸಲು ಸೂಚಿಸಿದೆ ಹಾಗೂ ಬಿಡುಗಡೆ ಮಾಡಿದ ಅನುದಾನವನ್ನು ನಿಗದಿತ ಅವಧಿಯಲ್ಲಿ ಬಳಕೆ ಮಾಡಿಕೊಳ್ಳದಿದ್ದಲ್ಲಿ ಮುಂದಿನ ಕಂತಿನ ಹಣವನ್ನು ಬಿಡುಗಡೆ ಮಾಡಲಾಗುವುದಿಲ್ಲವೆಂದು ಸೂಚಿಸಿದೆ.

4) ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2575–60–265–0–02–059 ಇತರೆ ವೆಚ್ಚಗಳು (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

5) ಈ ಆದೇಶವನ್ನು ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ:ಆಇ 467 ವೆಚ್ಚ–6/2009 ದಿನಾಂಕ:20.10.2009ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ. ಚಿಕ್ಕರಾಜು**
ಪಿ.ಆರ್. 2556 ಸರ್ಕಾರದ ಅಧೀನ ಕಾರ್ಯದರ್ಶಿ, 1 & 2,
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ:** ತಂತ್ರವಿದ್ಯಾ ನಿದರ್ಶಿನಿ, ಯಡಹಳ್ಳಿ, ಶಿರಸಿ ತಾಲ್ಲೂಕು ಉ.ಕ.ಜಿಲ್ಲೆ ಈ ಸಂಸ್ಥೆಯು ವಿಜ್ಞಾನ ಮತ್ತು ತಂತ್ರಜ್ಞಾನಕ್ಕೆ ಸಂಬಂಧಿಸಿದ ಕಾರ್ಯಕ್ರಮಗಳನ್ನು ಆಯೋಜಿಸಲು ಸಹಾಯಾನುದಾನ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ:ವಿಯಇ 55 ವಿತ್ರಮ 2009, ದಿನಾಂಕ 16–04–2009.
2) ಸಂಚಾಲಕರು, ತಂತ್ರವಿದ್ಯಾ ನಿದರ್ಶಿನಿ, ಯಡಹಳ್ಳಿ, ಶಿರಸಿ ತಾಲ್ಲೂಕು, ಉ.ಕ.ಜಿಲ್ಲೆ ಇವರ ಮನವಿ ದಿ:20–07–2009.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿನ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ, ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗದಲ್ಲಿ ಚಾಲ್ತಿಯಲ್ಲಿರುವ ಯೋಜನೆಗಳನ್ನು ಮುಂದುವರಿಸಿ, 2009–10ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 3425–60–200–0–01(101)(ಯೋ) ವೈಜ್ಞಾನಿಕ ಸಂಸ್ಥೆಗಳಿಗೆ ಸಹಾಯಾನುದಾನವಾಗಿ ಒಟ್ಟು ರೂ.340.00ಲಕ್ಷಗಳ ಅನುದಾನವನ್ನು ಕಲ್ಪಿಸಲಾಗಿದೆ.

ಮೇಲೆ ಓದಲಾದ (2)ರಲ್ಲಿನ ಪತ್ರಗಳಲ್ಲಿ ಸಂಚಾಲಕರು, ತಂತ್ರವಿದ್ಯಾ ನಿದರ್ಶಿನಿ, ಯಡಹಳ್ಳಿ, ಶಿರಸಿ ತಾಲ್ಲೂಕು, ಉ.ಕ.ಜಿಲ್ಲೆ ಇವರು ಗ್ರಾಮೀಣ ತಂತ್ರಜ್ಞಾನಗಳ ಬಗ್ಗೆ ಮಾಹಿತಿ ಪ್ರಚಾರ ಮತ್ತು ಅಳವಡಿಕೆ ತರಬೇತಿ, ಪ್ರಾತ್ಯಕ್ಷಿಕೆ ನಡೆಸುವುದು ಮತ್ತು ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ಹಣಕಾಸಿನ ನೆರವನ್ನು ನೀಡುವಂತೆ ಕೋರಿದ್ದಾರೆ.

ಈ ಬಗ್ಗೆ ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿಯ ಸದಸ್ಯ–ಕಾರ್ಯದರ್ಶಿರವರು ತಂತ್ರವಿದ್ಯಾ ನಿದರ್ಶಿನಿ, ಯಡಹಳ್ಳಿ, ಶಿರಸಿ ತಾಲ್ಲೂಕು, ಉ.ಕ.ಜಿಲ್ಲೆ. ಈ ಸಂಸ್ಥೆಯು ಹಮ್ಮಿಕೊಳ್ಳುವ ಕಾರ್ಯಕ್ರಮಕ್ಕಾಗಿ ಸರ್ಕಾರದ ವತಿಯಿಂದ ಸಹಾಯಾನುದಾನ ನೀಡುವಂತೆ ಶಿಫಾರಸ್ಸು ಮಾಡಿರುವುದನ್ನು ಪರಿಗಣಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ವಿಯಇ 140 ವಿತ್ರಮ 2009, ಬೆಂಗಳೂರು, ದಿನಾಂಕ: 6ನೇ ನವೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ತಂತ್ರವಿದ್ಯಾ ನಿದರ್ಶಿನಿ, ಯಡಹಳ್ಳಿ, ಶಿರಸಿ ತಾಲ್ಲೂಕು, ಉ.ಕ.ಜಿಲ್ಲೆ ಈ ಸಂಸ್ಥೆಯು ವಿಜ್ಞಾನ ಮತ್ತು ತಂತ್ರಜ್ಞಾನಕ್ಕೆ ಸಂಬಂಧಿಸಿದ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವ ಸಲುವಾಗಿ ರೂ.75,000/– (ರೂಪಾಯಿ ಎಪ್ಪತ್ತೈದು ಸಾವಿರಗಳು ಮಾತ್ರ)ಗಳನ್ನು ಸರ್ಕಾರದ ಸಹಾಯಾನುದಾನವಾಗಿ ಈ ಕೆಳಕಂಡ ನಿಬಂಧನೆಗೊಳಪಟ್ಟು ಗೌರವ ಕಾರ್ಯದರ್ಶಿ, ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು, ಬೆಂಗಳೂರು ಇವರಿಗೆ ಮಂಜೂರು ಮಾಡಿದೆ.

1) ಈ ಅನುದಾನವನ್ನು ಆಯವ್ಯಯ ಲೆಕ್ಕ ಶೀರ್ಷಿಕೆ 3425–60–200–0–01(101)(ಯೋ) ವೈಜ್ಞಾನಿಕ ಸಂಸ್ಥೆಗಳಿಗೆ ಸಹಾಯಾನುದಾನ ಇದರಡಿ ಭರಸತಕ್ಕದ್ದು.

2) ಈ ಮೊತ್ತವನ್ನು ಗೌರವ ಕಾರ್ಯದರ್ಶಿ, ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು ಬೆಂಗಳೂರು ಇವರು ಖಜಾನೆಯಿಂದ ಪಡೆದು ಮೇಲ್ಕಾಣಿಸಿದ ಕಾರ್ಯಕ್ರಮಕ್ಕಾಗಿ ಸಂಚಾಲಕರು, ತಂತ್ರವಿದ್ಯಾ ನಿದರ್ಶಿನಿ, ಯಡಹಳ್ಳಿ–581340, ಶಿರಸಿ ತಾಲ್ಲೂಕು, ಉ.ಕ.ಜಿಲ್ಲೆ ಇವರಿಗೆ ಪಾವತಿಸತಕ್ಕದ್ದು.

3) ಈಗ ಬಿಡುಗಡೆ ಮಾಡಿದ ಹಣವನ್ನು ಉದ್ದೇಶಿತ ಯೋಜನೆಗೆ ಮಾತ್ರ ಉಪಯೋಗಿಸತಕ್ಕದ್ದು, ಮತ್ತು ಕಾರ್ಯಗತಗೊಳಿಸಿದ ಚಟುವಟಿಕೆಯ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

4) ಈ ಹಣವನ್ನು ಸದುಪಯೋಗಿಸಿಕೊಂಡಿರುವುದಕ್ಕೆ ಉಪಯೋಗತಾ ಪ್ರಮಾಣ ಪತ್ರವನ್ನು ಹಾಗೂ ಲೆಕ್ಕ ಪರಿಶೋಧಕರಿಂದ ದೃಢೀಕರಿಸಲ್ಪಟ್ಟ ತನಿಖಾ ವರದಿಗಳನ್ನು ದಿನಾಂಕ: 30–5–2010ರೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

5) ಕಾರ್ಯಕ್ರಮಗಳನ್ನು ನಡೆಸಿದ ಸ್ಥಳ. ಕಾರ್ಯಕ್ರಮದ ವಿವರ, ಸಾರ್ವಜನಿಕರಿಗೆ ಆಗಿರುವ ಅನುಕೂಲಗಳು ಮೊದಲಾದ ಪೂರ್ಣ ವಿವರಗಳನ್ನು ಸಂಬಂಧಪಟ್ಟ ದಾಖಲೆಗಳ ಸಮೇತ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಆಇ1 ಟಿಎಫ್‌ಪಿ 2008, ದಿನಾಂಕ: 16–05–2008ರಡಿ ಇಲಾಖಾ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಪ್ರದತ್ತವಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಬೋರಲಿಂಗಯ್ಯ**

ಪಿ.ಆರ್. 2557 ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

**ವಿಷಯ:** ಬೆಂಗಳೂರು ವಿದುನ್ಮಾನ ನಗರದಲ್ಲಿ ಜೈವಿಕ ತಂತ್ರಜ್ಞಾನ ಉದ್ಯಾನ (Biotech Park) ಯೋಜನೆಯ ಭಾಗ 'ಎ' ಹಂತ–2ರ ಕಾಮಗಾರಿಗಳ ಅನುಷ್ಠಾನಕ್ಕಾಗಿ 2009–10ನೇ ಸಾಲಿನಲ್ಲಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ ಮಾತಂಇ 36 ಅಜವಿ 2008, ದಿನಾಂಕ 30–03–2009.

2) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು ಇವರ ಪತ್ರ ಸಂ: ಕೆಬಿಟ್ಸ್/ಬಿಟಿಪಿ/ಭಾಗ–ಎ ಹಂತ–2/ಕ–15/09–10, ದಿನಾಂಕ: 30–09–2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 30–03–2009ರ ಸರ್ಕಾರಿ ಆದೇಶದಲ್ಲಿ ಬಯೋಟೆಕ್ ಪಾರ್ಕ್ ಯೋಜನೆಯ ಭಾಗ–ಎ 2ನೇ ಹಂತದ ಕಾಮಗಾರಿಗಳನ್ನು ಕಾರ್ಯಗತಗೊಳಿಸಲು 2008–09ನೇ ಸಾಲಿನ ಆಯವ್ಯಯದಲ್ಲಿ ಒದಗಿಸಲಾದ ರೂ.200.00 ಲಕ್ಷಗಳ ಅನುದಾನವನ್ನು ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು ಸಂಸ್ಥೆಗೆ ಬಿಡುಗಡೆ ಮಾಡಲಾಗಿದೆ.

ಮೇಲೆ (2)ರಲ್ಲಿ ಓದಲಾದ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು ಇವರ ಪತ್ರದಲ್ಲಿ ಬಯೋಟೆಕ್ ಪಾರ್ಕ್ ಯೋಜನೆಯ ಭಾಗ–ಎ –2ನೇ ಹಂತದ ಕಾಮಗಾರಿಗಾಗಿ ಲೋಕೋಪಯೋಗಿ ಇಲಾಖೆ ತಾಂತ್ರಿಕ ಅನುಮೋದನೆ ಪಡೆಯಲಾಗಿದೆಯೆಂದು ತಿಳಿಸಿರುತ್ತಾರೆ. ಸದರಿ ಕಾಮಗಾರಿಯ ಪ್ರಗತಿಯನ್ನು ಪರಿಶೀಲಿಸುವ ಸಂದರ್ಭದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕೆಬಿಟ್ಸ್ ಇವರು ಟೆಂಡರ್ ಪ್ರಕ್ರಿಯೆಯನ್ನು ಡಿಸೆಂಬರ್ ಅಂತ್ಯದಲ್ಲಿ ಪೂರ್ಣಗೊಳಿಸಿ ಜನವರಿ ಮೊದಲನೆಯ ವಾರದಲ್ಲಿ ಕಾಮಗಾರಿಯನ್ನು ಪ್ರಾರಂಭಿಸಲಾಗುವುದೆಂದು ತಿಳಿಸಿರುತ್ತಾರೆ. ಈ ಹಿಂದೆ ಬಿಡುಗಡೆಗೊಳಿಸಿರುವ ಒಟ್ಟಾರೆ ಮೊತ್ತದಲ್ಲಿ ಉಳಿದ ಮೊತ್ತವಾದ ರೂ.155 ಲಕ್ಷಗಳಿದ್ದು, ಉಳಿದ ಕಾಮಗಾರಿಯನ್ನು ನಿಗದಿತ ಸಮಯದಲ್ಲಿ ಯಶಸ್ವಿಯಾಗಿ ಪೂರೈಸಲು ರೂ.100 ಲಕ್ಷಗಳನ್ನು, 2009–10ನೇ ಆರ್ಥಿಕ ವರ್ಷದ ಅನುದಾನದಲ್ಲಿ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿ, ಬೆಂಗಳೂರು ವಿದ್ಯುನ್ಮಾನ ನಗರದಲ್ಲಿನ ಬಯೋಟೆಕ್ ಪಾರ್ಕ್ ಭಾಗ–ಎ, ಹಂತ–2 ಕಾಮಗಾರಿಯನ್ನು ಅನುಷ್ಠಾನಗೊಳಿಸಲು 2009–10ನೇ ಸಾಲಿನ ಆಯವ್ಯಯದಲ್ಲಿ ಒದಗಿಸಲಾಗಿರುವ ರೂ. 100 ಲಕ್ಷಗಳಲ್ಲಿ ಸಧ್ಯಕ್ಕೆ ರೂ.50 ಲಕ್ಷಗಳನ್ನು ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಮಾತಂಇ 36 ಅಜವಿ 2008, ಬೆಂಗಳೂರು, ದಿನಾಂಕ: 10ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಬೆಂಗಳೂರು ವಿದ್ಯುನ್ಮಾನ ನಗರದಲ್ಲಿನ ಬಯೋಟೆಕ್ ಪಾರ್ಕ್ ಭಾಗ–ಎ, ಹಂತ–2 ಕಾಮಗಾರಿಯನ್ನು ಅನುಷ್ಠಾನಗೊಳಿಸಲು 2009–10ನೇ ಸಾಲಿನ ಆಯವ್ಯಯದಲ್ಲಿ ಒದಗಿಸಲಾದ ರೂ.100 ಲಕ್ಷಗಳಲ್ಲಿ ರೂ.50 ಲಕ್ಷಗಳ (ರೂ.ಐವತ್ತು ಲಕ್ಷಗಳು ಮಾತ್ರ) ಅನುದಾನವನ್ನು ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು ಸಂಸ್ಥೆಗೆ ವಿತರಿಸುವ ಸಂಬಂಧ ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಇವರಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ನಿರ್ದೇಶಕರು, ಕೆಬಿಟ್ಸ್ ಸಂಸ್ಥೆ ಇವರಿಗೆ ವಿತರಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ **'5465–1–190–1–09 ಬಯೋಟೆಕ್ ಪಾರ್ಕ್–059–ಇತರೆ ಖರ್ಚುಗಳು (ಯೋಜನೆ)'** ಇದರ ಅಡಿಯಲ್ಲಿ ಪ್ರಸ್ತಕ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಅನುದಾನದ ಬಳಕೆಯ ಬಗ್ಗೆ ನಿರ್ದೇಶಕರು ಕೆಬಿಟ್ಸ್ ಸಂಸ್ಥೆ ಇವರಿಂದ ಉಪಯೋಗಿತಾ ದೃಢೀಕರಣ ಪತ್ರವನ್ನು ವೆಚ್ಚ ಮಾಡಿದ ಅನುದಾನದ ವಿವರಗಳ ಜೊತೆಗೆ ಪಡೆದು ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಸಿ 2008, ದಿನಾಂಕ: 16–5–2008ರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 2558 ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

## INFRASTRUCTURE DEVELOPMENT SECRETARIAT

## ADDENDUM

**No.IDD 71 IDM 2008, Bangalore, dated: 4th November 2009**

**Sub:** Release of funds for pre-feasibility studies undertaken by the consultants.

In the preamble portion of G.O. No IDD 71 IDM 2008 dated 20-03-2009 the following shall be deemed to have been added and to include the following in the para no.4 after Sl.No.3 added vide, Addendum No. IDD 71 IDM 2009 dated 17-09-2009.

4. Development of Industrial Park at VADA, Bellary.
5. Preparation of Railway infrastructure plan for Karnataka
6. Development of Part at Tadri, Uttara Kannada District
7. Development of Heritage park at Belgaum.
8. Any other projects falling under sectors enumerated in para 2 of G.O. No.IDD 32 IDM 2003 dated 16-07-2009(New infrastructure policy-2007) as may be initiated by the IDD from time to time.

By order and in name of the Governor of Karnataka

**N. MANJULA GEETHA**

P.R. 2559 Under Secretary to Government,

Infrastructure Development Department

## ಸಮಾಜ ಕಲ್ಯಾಣ ಸಚಿವಾಲಯ

## ಸೇರ್ಪಡೆ ಆದೇಶ

**ಸಂಖ್ಯೆ:ಸಕಇ 253 ಬಿಸಿಎ 2009, ಬೆಂಗಳೂರು, ದಿನಾಂಕ: 9ನೇ ನವೆಂಬರ್ 2009**

ಸರ್ಕಾರದ ಆದೇಶ ಸಂಖ್ಯೆ:ಸಕಇ 221 ಬಿಸಿಎ 2009 ದಿನಾಂಕ: 02–01–2009 ಆದೇಶಕ್ಕೆ ವಿಧಾನ ಸಭಾ ಕ್ಷೇತ್ರದ ಶಾಸಕರ ಅಧ್ಯಕ್ಷತೆಯಲ್ಲಿ ರಚಿಸಿರುವ ಸಮಿತಿಗೆ ಈ ಕೆಳಕಂಡ ಅಧಿಕಾರಿಗಳನ್ನು ನಿಗಮಗಳು ಅನುಷ್ಠಾನಗೊಳಿಸುತ್ತಿರುವ ಎಲ್ಲಾ ಯೋಜನೆಗಳ ಫಲಾನುಭವಿಗಳನ್ನು ಆಯ್ಕೆ ಮಾಡಲು ಆಯ್ಕೆ ಸಮಿತಿಯಲ್ಲಿ ಸದಸ್ಯರನ್ನಾಗಿ ಸೇರ್ಪಡೆಗೊಳಿಸಲಾಗಿದೆ.

1) ಲೀಡ್ ಬ್ಯಾಂಕ್ ಆಫೀಸರ್/ಪ್ರತಿನಿಧಿ
2) ಸಹಕಾರ ಸಂಘಗಳ ಸಹಾಯಕ ನಿಬಂಧಕರು
3) ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯ ತಾಲ್ಲೂಕು ಮಟ್ಟದ ಅಧಿಕಾರಿಗಳು.

ಉಳಿದಂತೆ ದಿನಾಂಕ: 02–01–2009ರ ಸರ್ಕಾರಿ ಆದೇಶದಲ್ಲಿ ಯಾವುದೇ ಬದಲಾವಣೆಗಳು ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2561 **ಎಂ.ಎಂ. ಬಾಟೆ**

ಸರ್ಕಾರದ ಅಧೀನ ಕಾರ್ಯದರ್ಶಿ–III, ಸಮಾಜ ಕಲ್ಯಾಣ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಪಿ.ಪಿ. ಇನ್ಸಿಟಿಟ್ಯೂಟ್ ಆಫ್ ಪ್ಯಾರಾಮೆಡಿಕಲ್ ಸೈನ್ಸಸ್, ಶಹಾಪೂರ, ಗುಲ್ಬರ್ಗ–ಪ್ಯಾರಾ ಮೆಡಿಕಲ್ ಕೋರ್ಸ್‌ಗಳ ಮಂಜೂರಾತಿ ಬಗ್ಗೆ.

**ಓದಲಾಗಿದೆ:** ಪತ್ರ ಸಂಖ್ಯೆ: ಪಿಎಂಬಿ/37/08–09 ದಿನಾಂಕ: 27–07–2009.

**ಪ್ರಸ್ತಾವನೆ:**

ಕರ್ನಾಟಕ ಪ್ಯಾರಾ ಮೆಡಿಕಲ್ ಬೋರ್ಡ್‌ನ ಸದಸ್ಯ ಕಾರ್ಯದರ್ಶಿಯವರು ಮೇಲೆ ಓದಲಾದ ತಮ್ಮ ಪತ್ರದಲ್ಲಿ ಪಿ.ಪಿ. ಇನ್ಸಿಟಿಟ್ಯೂಟ್ ಆಫ್ ಪ್ಯಾರಾಮೆಡಿಕಲ್ ಸೈನ್ಸಸ್, ಶಹಾಪೂರ, ಗುಲ್ಬರ್ಗ ಇವರಿಗೆ ಡಿಪ್ಲೊಮ ಇನ್ ಲ್ಯಾಬೊರೇಟರಿ ಟೆಕ್ನಾಲಜಿ ಮತ್ತು ಡಿಪ್ಲೋಮ ಇನ್ ಹೆಲ್ತ್ ಇನ್ಸ್‌ಪೆಕ್ಟರ್ ಕೋರ್ಸ್‌ಗಳ ಮಂಜೂರಾತಿಗಾಗಿ ಅರ್ಜಿಯನ್ನು ಪ್ಯಾರಾ ಮೆಡಿಕಲ್ ಮಂಡಳಿಗೆ ಸಲ್ಲಿಸಿದ್ದಾರೆಂದು, ಮಂಡಳಿಯು ವಿಷಯ ತಜ್ಞರ ತಂಡವನ್ನು ರಚಿಸಿ ಕೋರ್ಸುಗಳನ್ನು ಸಂಸ್ಥೆಯು ನಡೆಸಲು ಹೊಂದಿರುವ ಮೂಲಭೂತ ಸೌಕರ್ಯಗಳನ್ನು ಪರಿವೀಕ್ಷಿಸಿ ಅದರ ವರದಿಯನ್ನು ಸಲ್ಲಿಸಲು ಸೂಚಿಸಿತ್ತೆಂದು ತಜ್ಞರ ತಂಡವು ಸಂಸ್ಥೆಗೆ ದಿನಾಂಕ: 15–01–2009 ಮತ್ತು 19–01–2009ರಂದು ಭೇಟಿ ನೀಡಿ ಪರಿವೀಕ್ಷಿಸಿ, ವರದಿಯನ್ನು ಸೂಕ್ತ ಶಿಫಾರಸ್ಸಿನೊಂದಿಗೆ ಮಂಡಳಿಗೆ ಸಲ್ಲಿಸಿತ್ತೆಂದು, ತಜ್ಞರ ತಂಡದ ಪರಿವೀಕ್ಷಣ ವರದಿಯನ್ನು ದಿನಾಂಕ: 03–07–2009ರಂದು ನಡದ ಮಂಡಳಿಯ ಸಭೆಯಲ್ಲಿ ವಿಶ್ಲೇಷಿಸಿ ಸಂಸ್ಥೆಯವರು ದಿನಾಂಕ: 31–01–2010ರೊಳಗೆ ವಿದ್ಯಾರ್ಥಿಗಳನ್ನು ಸೇರ್ಪಡಿಸಿಕೊಂಡು ಮಂಡಳಿಯ ನಿಯಮಾನುಸಾರ ಬ್ಯಾಂಕ್ ಗ್ಯಾರಂಟಿ ಸಂಯೋಜನ ಶುಲ್ಕದೊಂದಿಗೆ ವಿದ್ಯಾರ್ಥಿಗಳ ಮೂಲ ದಾಖಲೆಗಳನ್ನು ನೊಂದಣಿ ಶುಲ್ಕದೊಂದಿಗೆ ಸಲ್ಲಿಸಿದ ಪಕ್ಷದಲ್ಲಿ ಅಂತಹ ವಿದ್ಯಾರ್ಥಿಗಳನ್ನು 2009–10ರ ತಂಡದವರೆಂದು ಪರಿಗಣಿಸಿ ನವೆಂಬರ್ 2010ರಲ್ಲಿ ಜರುಗಲಿರುವ ಮಂಡಳಿಯ ಪರೀಕೆಗೆ ಅವಕಾಶ ಕಲ್ಪಿಸಿಕೊಡಲಾಗುವುದು, ಒಂದು ವೇಳೆ ದಿನಾಂಕ: 31–01–2010ರ ನಂತರ ಸಂಸ್ಥೆಯವರು ಮೇಲೆ ಹೇಳಲಾದ ದಾಖಲೆಗಳನ್ನು ಸಲ್ಲಿಸಿದಲ್ಲಿ ಅಂತಹ ವಿದ್ಯಾಥಿಗಳ ನೊಂದಾವಣೆಯನ್ನು 2010–11ರ ಸಾಲಿಗೆ ಪರಿಗಣಿಸಲಾಗುವುದು ಎಂದು ತಿಳಿಸಿ ಕೋರ್ಸ್‌ಗಳನ್ನು ಮಂಜೂರು ಮಾಡಲು ಶಿಫಾರಸ್ಸು ಮಾಡಿದೆಯೆಂದು ವರದಿ ಮಾಡುತ್ತಾ ಮಂಜೂರಾತಿ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಪ್ರಕರಣವನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪಿ.ಪಿ. ಇನ್ಸಿಟಿಟ್ಯೂಟ್ ಆಫ್ ಪ್ಯಾರಾಮೆಡಿಕಲ್ ಸೈನ್ಸಸ್, ಶಹಾಪೂರ, ಗುಲ್ಬರ್ಗ ಇವರಿಗೆ ಡಿಪ್ಲೊಮ ಇನ್ ಲ್ಯಾಬೊರೇಟರಿ ಟೆಕ್ನಾಲಜಿ ಮತ್ತು ಡಿಪ್ಲೋಮ ಇನ್ ಹೆಲ್ತ್ ಇನ್ಸ್‌ಪೆಕ್ಟರ್ ಕೋರ್ಸ್‌ಗಳನ್ನು 2009–10ನೇ ಸಾಲಿನಿಂದ ಪ್ರಾರಂಭಿಸಲು ಮಂಜೂರಾತಿ ನೀಡಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಆಕುಕ 53 ಎಂಎಂಇ 2009, ಬೆಂಗಳೂರು, ದಿನಾಂಕ: 9ನೇ ನವೆಂಬರ್ 2009**

ಪಿ.ಪಿ. ಇನ್ಸಿಟಿಟ್ಯೂಟ್ ಆಫ್ ಪ್ಯಾರಾಮೆಡಿಕಲ್ ಸೈನ್ಸಸ್, ಶಹಾಪೂರ, ಗುಲ್ಬರ್ಗ ಇವರಿಗೆ ತಲಾ 20 (ಇಪ್ಪತ್ತು) ವಿದ್ಯಾರ್ಥಿಗಳ ವಾರ್ಷಿಕ ಪ್ರವೇಶ ಮಿತಿಯೊಂದಿಗೆ ಡಿಪ್ಲೊಮ ಇನ್ ಲ್ಯಾಬೊರೇಟರಿ ಟೆಕ್ನಾಲಜಿ ಮತ್ತು ಡಿಪ್ಲೋಮ ಇನ್ ಹೆಲ್ತ್ ಇನ್ಸ್‌ಪೆಕ್ಟರ್ ಕೋರ್ಸ್‌ಗಳನ್ನು 2009–10ನೇ ಶೈಕ್ಷಣಿಕ ವರ್ಷದಿಂದ ಜಾರಿಗೆ ಬರುವಂತೆ ಪ್ರಾರಂಭಿಸಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟು ಮಂಜೂರಾತಿ ನೀಡಿದೆ.

**ಷರತ್ತುಗಳು**

1) ಯಾವುದೇ ಪ್ಯಾರಾ ಮೆಡಿಕಲ್ ಕೋರ್ಸುಗಳನ್ನು ಪ್ರಾರಂಭ ಮಾಡುವ ಮೊದಲು ಸಂಸ್ಥೆಯು ಸಂಯೋಜನಾ ಶುಲ್ಕದ ರೂಪದಲ್ಲಿ ಪ್ರತಿ ಕೋರ್ಸಿಗೆ ರೂ.30,000/– (ಮೂವತ್ತು ಸಾವಿರ ರೂಪಾಯಿಗಳು ಮಾತ್ರ) ಹಾಗೂ ಪ್ರತಿ ವರ್ಷ ಸಂಯೋಜನಾ ನವೀಕರಣ ಶುಲ್ಕವಾಗಿ ರೂ.10,000/– (ಹತ್ತು ಸಾವಿರ ರೂಪಾಯಿಗಳು ಮಾತ್ರ) ಅನ್ನು ಪ್ಯಾರಾ ಮೆಡಿಕಲ್ ಬೋರ್ಡಿಗೆ ಸಂದಾಯ ಮಾಡತಕ್ಕದ್ದು.

2) ಸಂಸ್ಥೆಯವರು ಕೋರ್ಸನ್ನು ಪ್ರಾರಂಭಿಸುವ ಮೊದಲು ಬೋರ್ಡ್ ನಿಗಧಿಪಡಿಸುವ ಬ್ಯಾಂಕ್ ಗ್ಯಾರಂಟಿಯನ್ನು ಒದಗಿಸತಕ್ಕದ್ದು.

3) ಸದರಿ ಕೋರ್ಸುಗಳಿಗೆ ವಿದ್ಯಾರ್ಥಿ ಪ್ರವೇಶವನ್ನು ವರ್ಷಕ್ಕೆ ಒಂದು ಬಾರಿ ನವೆಂಬರ್ ತಿಂಗಳೊಳಗೆ ತೆಗೆದುಕೊಂಡು ಜನವರಿ ಅಥವಾ ಫೆಬ್ರವರಿ ತಿಂಗಳ ಮದ್ಯಾಂತರದೊಳಗೆ ವಿದ್ಯಾರ್ಥಿಗಳ ಪಟ್ಟಿಯನ್ನು ಮೂಲ ಅಂಕಪಟ್ಟಿ ಮತ್ತು ದೃಢೀಕರಣಗಳನ್ನು ಬೋರ್ಡಿಗೆ ಸಲ್ಲಿಸತಕ್ಕದ್ದು.

4) ಸದರಿ ಕೋರ್ಸುಗಳಿಗೆ ಪ್ರವೇಶ ಪಡೆದ ಪ್ರತಿ ವಿದ್ಯಾರ್ಥಿಗೆ ರೂ.500.00ರಂತೆ ನೊಂದಣಿ ಶುಲ್ಕದೊಂದಿಗೆ ವಿದ್ಯಾರ್ಥಿಗಳ ಆಯ್ಕೆ ಪಟ್ಟಿಯನ್ನು ಅವರ ವಿದ್ಯಾರ್ಹತೆಯ ಪ್ರಮಾಣ ಪತ್ರದೊಂದಿಗೆ ಮಂಜೂರಾತಿಗಾಗಿ ಪ್ಯಾರಾ ಮೆಡಿಕಲ್ ಬೋರ್ಡಿಗೆ ಸಲ್ಲಿಸತಕ್ಕದ್ದು.

5) ಪ್ಯಾರಾ ಮೆಡಿಕಲ್ ಕೋರ್ಸಿಗೆ ಪ್ರವೇಶ ಪಡೆಯಲು ಕನಿಷ್ಠ ವಿದ್ಯಾರ್ಹತೆಯು ಪಿ.ಯು.ಸಿ. ಅಥವಾ ತತ್ಸಮಾನ ವಿದ್ಯಾರ್ಹತೆಯನ್ನು ಹೊಂದಿರಬೇಕು.

6) ಪ್ಯಾರಾ ಮೆಡಿಕಲ್ ಕೋರ್ಸಿಗೆ ಪ್ರವೇಶ ಪಡೆದ ಪ್ರತಿ ವಿದ್ಯಾರ್ಥಿಯಿಂದ ಸರ್ಕಾರ ನಿಗದಿಪಡಿಸಿದ ಶುಲ್ಕವನ್ನು ಮಾತ್ರ ಪಡೆಯತಕ್ಕದ್ದು.

7) ಸರ್ಕಾರ ಮಂಜೂರಾತಿ ನೀಡಿದ ಪ್ರವೇಶ ಮಿತಿಗಿಂತ ಹೆಚ್ಚಿನ ವಿದ್ಯಾರ್ಥಿಗಳಿಗೆ ಪ್ರವೇಶ ನೀಡತಕ್ಕದ್ದು, ಒಂದು ವೇಳೆ ನಿಗದಿಪಡಿಸಿದ ಪ್ರವೇಶ ಮಿತಿಗಿಂತ ಹೆಚ್ಚಿನ ಪ್ರವೇಶ ಮಾಡಿಕೊಂಡಲ್ಲಿ ಅದರಿಂದ ಉಂಟಾಗುವ ಅನಾನುಕೂಲ ಸಮಸ್ಯೆಗಳಿಗೆ ಸಂಸ್ಥೆಯೇ ಜವಾಬ್ದಾರಿಯಾಗಿರುತ್ತದೆ.

8) ಸಂಸ್ಥೆಯವರಿಗೆ ನಿಗಧಿಪಡಿಸಿದ ಸೀಟುಗಳಲ್ಲಿ ಶೇ.20ರಷ್ಟನ್ನು ಸರ್ಕಾರದಿಂದ ಆಯ್ಕೆ ಮಾಡಿದ ಅಭ್ಯರ್ಥಿಗಳಿಗೆ ಪ್ರವೇಶ ನೀಡಲು ಸಂಸ್ಥೆಯು ಬದ್ಧವಾಗಿರತಕ್ಕದ್ದು.

9) ಪ್ಯಾರಾ ಮೆಡಿಕಲ್ ಬೋರ್ಡ್ ನಿಗದಿಪಡಿಸಿದ ನಿಯಮಾವಳಿಯಂತೆ, ಪ್ಯಾರಾ ಮೆಡಿಕಲ್ ಕೋರ್ಸಿಗೆ ಪ್ರವೇಶ ಪಡೆಯುವ ಪ್ರತಿ ವಿದ್ಯಾರ್ಥಿಯು ವಯೋಮಿತಿ, ಪಠ್ಯಕ್ರಮ, ಕೋರ್ಸಿನ ಅವಧಿ ಹಾಗೂ ಪರೀಕ್ಷಾ ಕ್ರಮ ಮತ್ತು ಪ್ಯಾರಾ ಮೆಡಿಕಲ್ ಬೋರ್ಡ್ ನಿಗದಿಪಡಿಸಿದ ಇತರೆ ನಿಯಮಗಳನ್ನು ಸಂಸ್ಥೆಯು ಚಾಚೂ ತಪ್ಪದೇ ಕಡ್ಡಾಯವಾಗಿ ಪಾಲಿಸತಕ್ಕದ್ದು.

10) ಸಂಸ್ಥೆಯು ಸುಸಜ್ಜಿತ ತರಗತಿ ಕೊಠಡಿ, ಪ್ರಯೋಗಶಾಲೆ, ವಾಚನಾಲಯ, ವಿದ್ಯಾರ್ಥಿನಿಲಯ ಹಾಗೂ ಇತರೆ ಸೌಲಭ್ಯವನ್ನು ವಿದ್ಯಾರ್ಥಿಗಳಿಗೆ ಒದಗಿಸತಕ್ಕದ್ದು.

11) ಸದರಿ ಸಂಸ್ಥೆಯು ಹೊಂದಿರುವ ಮೂಲಭೂತ ಸೌಕರ್ಯಗಳ ಬಗ್ಗೆ ವಿದ್ಯಾರ್ಥಿಗಳು ಮೊದಲ ವರ್ಷದ ಪರೀಕ್ಷೆಯನ್ನು ತೆಗೆದುಕೊಳ್ಳುವ ಪೂರ್ವದಲ್ಲಿ ಪ್ಯಾರಾ ಮೆಡಿಕಲ್ ಬೋಡ್ ಇಚ್ಚಿಸಿದಲ್ಲಿ ಎರಡನೇ ಬಾರಿಗೆ ಸಂಸ್ಥೆಯನ್ನು ತಪಾಸಣೆ ಮಾಡತಕ್ಕದ್ದು.

12) ಸರ್ಕಾರದಿಂದ ಯಾವುದೇ ಆರ್ಥಿಕ ಸೌಲಭ್ಯ ಅಥವಾ ಅನುದಾನವನ್ನು ಸಂಸ್ಥೆಗೆ ನೀಡಲಾಗುವುದಿಲ್ಲ.

13) ಸಂಸ್ಥೆಯನ್ನು ಪ್ಯಾರಾ ಮೆಡಿಕಲ್ ಬೋರ್ಡ್‌ನಲ್ಲಿ ನೋಂದಣಿ ಮಾಡಿಸತಕ್ಕದ್ದು ಹಾಗೂ ಪ್ಯಾರಾ ಮೆಡಿಕಲ್ ಬೋರ್ಡ್ ನಿಗದಿಪಡಿಸುವ ಮಾದರಿಯನ್ನು ಅನುಸರಿಸತಕ್ಕದ್ದು.

14) ಪ್ಯಾರಾ ಮೆಡಿಕಲ್ ಕೋರ್ಸಿನ ಅಂತ್ಯದಲ್ಲಿ ಪ್ಯಾರಾ ಮೆಡಿಕಲ್ ಬೋರ್ಡ್ ನಡೆಸುವ ಪರೀಕ್ಷೆಯನ್ನು ವಿದ್ಯಾರ್ಥಿಗಳು ತೆಗೆದುಕೊಂಡು, ಉತ್ತೀರ್ಣರಾಗುವ ವಿದ್ಯಾಥಿಗಳಿಗೆ ಪ್ರಮಾಣಪತ್ರವನ್ನು ಪ್ಯಾರಾ ಮೆಡಿಕಲ್ ಬೋರ್ಡಿನಿಂದ ಪಡೆಯತಕ್ಕದ್ದು.

15) ಪ್ರತಿ ತಪಾಸಣೆಗೆ ಮತ್ತು ಒಂದು ಕೋರ್ಸಿಗೆ ಸಂಸ್ಥೆಯು ರೂ.10,000/– (ಹತ್ತು ಸಾವಿರ ರೂಪಾಯಿಗಳು ಮಾತ್ರ) ಅನ್ನು ತಪಾಸಣಾ ಶುಲ್ಕವಾಗಿ ಪ್ಯಾರಾ ಮೆಡಿಕಲ್ ಬೋರ್ಡಿಗೆ ಪಾವತಿ ಮಾಡತಕ್ಕದ್ದು.

16) ದಿನಾಂಕ: 30–03–1999 ಸಂಖ್ಯೆ: ಆಕುಕ 144 ಎಂಎಂಇ 98ರ ಸರ್ಕಾರಿ ಆದೇಶದಲ್ಲಿ ನಿರ್ದಿಷ್ಟಪಡಿಸಿರುವ ಮಾರ್ಗಸೂಚಿಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು ಹಾಗೂ ಆಕುಕ 328 ಎಂಎಸ್‌ಎಫ್ 07, ದಿನಾಂಕ: 27–07–2007ರಲ್ಲಿ ತಿಳಿಸಿರುವ ಅದೇಶವನ್ನು ಪಾಲಿಸತಕ್ಕದ್ದು.

17) ಪ್ರಸ್ತುತ ವಿಧಿಸುತ್ತಿರುವ ಮೇಲ್ಕಂಡ ನಿಗದಿತ ಷರತ್ತುಗಳನ್ನು ಉಲ್ಲಂಘಿಸಿದ ಸಂದರ್ಭದಲ್ಲಿ ಅಂತಹ ಪ್ಯಾರಾ ಮೆಡಿಕಲ್ ಶಾಲೆ/ಕೋರ್ಸ್‌ನ ಮಾನ್ಯತೆಯನ್ನು ರದ್ದು ಪಡಿರಬಹುದೆಂದು ಸಂಸ್ಥೆಯು ರೂ.100 ಚಾಪಾ ಕಾಗದದಲ್ಲಿ ಮುಚ್ಚಳಿಕೆಯನ್ನು ನೀಡತಕ್ಕದ್ದು.

18) ಪ್ರಸ್ತಾವಿತ ಶಾಲೆಯ ಕಟ್ಟಡವು ಬಾಡಿಗೆ/ಲೀಸ್ ಆದ ಪಕ್ಷದಲ್ಲಿ ಬಾಡಿಗೆ/ಲೀಸ್ ಕರಾರು ಪತ್ರವು ರೂ.100 ಚಾಪಾ ಕಾಗದಲ್ಲಿರಬೇಕು ಮತ್ತು ಬಾಡಿಗೆ/ಲೀಸ್ ಅವಧಿಯು ಕನಿಷ್ಠ 10 ವರ್ಷಗಳಿಗಿರಬೇಕು.

19) ಪ್ಯಾರಾ ಮೆಡಿಕಲ್ ಶಾಲೆ/ಕೋರ್ಸ್ ಮಂಜೂರಾತಿ ಆದ ದಿನಾಂಕದಿಂದ 5 ವರ್ಷದೊಳಗಾಗಿ ಮಂಜೂರಾತಿ ಪಡೆದ ಸಂಸ್ಥೆಯು ಪ್ಯಾರಾ ಮೆಡಿಕಲ್ ಶಾಲೆ/ಕೋರ್ಸ್‌ನ್ನು ನಡೆಸಲು ತನ್ನದೆ ಆದ ಸ್ವಂತ ಕಟ್ಟಡವನ್ನು ಹೊಂದುವುದಾಗಿ ರೂ.100 ಚಾಪಾ ಕಾಗದದಲ್ಲಿ ಮುಚ್ಚಳಿಕೆಯನ್ನು ನೀಡತಕ್ಕದ್ದು.

20) ಸಂಸ್ಥೆಯು ಪ್ರತಿ ವರ್ಷ ವಿದ್ಯಾರ್ಥಿಗಳ ಪ್ರವೇಶವನ್ನು ಮಾಡುವ ಮೊದಲು ಸಂಸ್ಥೆಯು ಪ್ರಾಂಶುಪಾಲರನ್ನು ಒಳಗೊಂಡಂತೆ ಎಲ್ಲಾ ಸಿಬ್ಬಂದಿಗಳ (ಬೋಧಕ ಮತ್ತು ಬೋಧಕೇತರ) ಸಂಪೂರ್ಣ ಮಾಹಿತಿಯನ್ನು ನೀಡತಕ್ಕದ್ದು.

21) ಮೇಲ್ಕಂಡ ಯಾವುದೇ ಷರತ್ತುಗಳನ್ನು ಸಂಸ್ಥೆಯು ಉಲ್ಲಂಘಿಸಿದ್ದಲ್ಲಿ ನಿಯಮಾನುಸಾರ ಕ್ರಮಕೈಗೊಳ್ಳಲಾಗುವುದು.

22) ಪ್ಯಾರಾ ಮೆಡಿಕಲ್ ಹೊಸ ಕೋರ್ಸ್‌ಗಳನ್ನು ಪ್ರಾರಂಭಿಸಲು ಬ್ಯಾಂಕ್ ಗ್ಯಾರಂಟಿ ಅಫಿಲಿಯೇಷನ್ ಫೀ ಮತ್ತು ವಿದ್ಯಾರ್ಥಿಗಳ ಮೂಲ ದಾಖಲೆಗಳನ್ನು ಸಂಸ್ಥೆಗಳು ದಿನಾಂಕ 31–01–2009ರೊಳಗಾಗಿ ಪ್ಯಾರಾ ಮೆಡಿಕಲ್ ಬೋರ್ಡಿಗೆ ನೀಡಿದಲ್ಲಿ 2009–10ನೇ ಸಾಲಿಗೆ ಮಂಜೂರಾತಿಯು ಅನ್ವಯಿಸತಕ್ಕದ್ದು ಅಥವಾ ದಿನಾಂಕ: 01–02–2008ರ ನಂತರ ನೀಡಿದಲ್ಲಿ 2008–09ನೇ ಸಾಲಿಗೆ ಮಂಜೂರಾತಿಯು ಜಾರಿಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ವಿ. ಶ್ರೀರಾಮರೆಡ್ಡಿ**

ಪಿ.ಆರ್. 2562 ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ)

## ಶಿಕ್ಷಣ ಸಚಿವಾಲಯ

**ವಿಷಯ:** ಶ್ರೀ ಜಗದ್ಗುರು ರೇಣುಕಾಚಾರ್ಯ ಶಿಕ್ಷಣ ಪ್ರತಿಷ್ಠಾನ (ರಿ), ಬಾಳೇಹೊನ್ನೂರು ಇದರ ವಿದ್ಯಾರ್ಥಿ ನಿಲಯ ನಿರ್ಮಾಣಕ್ಕಾಗಿ ಸಹಾಯಾನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಇಡಿ 336 ಯೋಯೋಕ 2007, ದಿನಾಂಕ: 06–03–2009.

2. ಬೆಂಗಳೂರು ಸಾರ್ವಜನಿಕ ಶಿಕ್ಷಣ ಇಲಾಖೆ ಆಯಕ್ತರು ಕಛೇರಿ ಇವರ ಪತ್ರ ಸಂಖ್ಯೆ: ಯೋ(5)ಶ್ರೀ.ಜ.ರೇ.ವಿ.ನಿ.ಅ ಬಗ್ಗೆ/24/2008–09,ದಿನಾಂಕ: 19–09–2009.

**ಪ್ರಸ್ತಾವನೆ:**

1. ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ 2008–09ನೇ ಸಾಲಿಗೆ ಶ್ರೀ ಜಗದ್ಗುರು ರೇಣುಕಾಚಾರ್ಯ ಶಿಕ್ಷಣ ಪ್ರತಿಷ್ಠಾನ (ರಿ), ಬಾಳೇ ಹೊನ್ನೂರು ಇದರ ವಿದ್ಯಾರ್ಥಿ ನಿಲಯ ನಿರ್ಮಾಣಕ್ಕಾಗಿ 50.00ಲಕ್ಷ (ಐವತ್ತು ಲಕ್ಷ ರೂಪಾಯಿಗಳು ಮಾತ್ರ) ರೂಗಳನ್ನು ಬಿಡುಗಡೆ ಮಾಡಲಾಗಿದೆ.
2. ಮೇಲೆ (2)ರಲ್ಲಿ ಓದಲಾದ ದಿನಾಂಕ: 19–09–2009ರ ಪತ್ರದಲ್ಲಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರು, ಬಾಳೇಹೊನ್ನೂರು ಶ್ರೀ ಜಗದ್ಗುರು ರೇಣುಕಾಚಾರ್ಯ ಶಿಕ್ಷಣ ಪ್ರತಿಷ್ಠಾನ ಇಲ್ಲಿಗೆ ವಿದ್ಯಾರ್ಥಿ ನಿಲಯ ನಿರ್ಮಾಣ ಮಾಡಲು ಉದ್ದೇಶಿಸಿರುವ ಕಟ್ಟಡ ನಿರ್ಮಾರ್ಣಕ್ಕಾಗಿ ಎರಡನೇ ಕಂತಾಗಿ 50.00ಲಕ್ಷ (ಐವತ್ತು ಲಕ್ಷ ರೂಪಾಯಿಗಳು ಮಾತ್ರ) ರೂಗಳನ್ನು ಬಿಡುಗಡೆ ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ.
3. ಸದರಿ ಪ್ರಸ್ತಾವನೆಯಲ್ಲಿ ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಇಡಿ 372 ಯೋಯೋಕ 2009, ಬೆಂಗಳೂರು, ದಿನಾಂಕ: 4ನೇ ನವೆಂಬರ್ 2009**

**(ಇಡಿ 136 ಸ್ವೀಮರ(ಯುನಿಕ್) 2009, ದಿನಾಂಕ: 4ನೇ ನವೆಂಬರ್ 2009**

4. 2009–10ನೇ ಸಾಲಿಗೆ ಶ್ರೀ ಜಗದ್ಗುರು ರೇಣುಕಾಚಾರ್ಯ ಶಿಕ್ಷಣ ಪ್ರತಿಷ್ಠನ ಬಾಳೇ ಹೊನ್ನೂರು ಇದರ ವಿದ್ಯಾರ್ಥಿ ನಿಲಯ ನಿರ್ಮಾಣ ಮಾಡಲು ಲೆಕ್ಕ ಶೀರ್ಷಿಕೆ 2202–01–053–0–01–200(ಯೋಜನೇತರ) ಅಡಿಯಲ್ಲಿ ಎರಡನೇ ಕಂತಾಗಿ 50.00ಲಕ್ಷ (ಐವತ್ತು ಲಕ್ಷರೂಪಾಯಿಗಳು ಮಾತ್ರ)ರೂಗಳನ್ನು ಮೇಲ್ಕಂಡ ಸಂಸ್ಥೆಗೆ ಬಿಡುಗಡೆ ಮಾಡಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಲಾಗಿದೆ. ಸದರಿ ಮೊತ್ತವನ್ನು ಉದ್ದೇಶಿತ ಕಾರ್ಯಕ್ರಮಕ್ಕೆ ಬಳಸುವಂತೆ ಸಂಸ್ಥೆಗೆ ಸೂಚಿಸತಕ್ಕದ್ದು.
5. ಸದರಿ ಆದೇಶವನ್ನು ಆರ್ಥಿಕ ಇಲಾಖೆ ಅನಧಿಕೃತ ಟಿಪ್ಪಣಿ ಸಂಖ್ಯೆ ಆಇ: 1438 ವೆಚ್ಚ–8/ 2009, ದಿನಾಂಕ:20.10.2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಐ.ಎಫ್. ಮಾಗಿ**

ಪಿ.ಆರ್. 2563 ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಯೋಜನೆ)

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಪಿ.ಸೀತಾರಾವ್, ಪ್ರೊ.ಪಿ.ಎಸ್ಐ, (ಸಿವಿಲ್)ರವರ ಖಾಯಂಪೂರ್ವ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** ಡಿಜಿ ಮತ್ತು ಐಜಿಪಿ, ಬೆಂಗಳೂರು ರವರ ಪತ್ರ ಸಂಖ್ಯೆ:ಸಿಬ್ಬಂದಿ–1/50/2009–10 ದಿನಾಂಕ:10.09.2009.

**ಪ್ರಸ್ತಾವನೆ:**

ಶ್ರೀ ಪಿ.ಸೀತಾರಾಮ್, ಪ್ರೊ.ಪಿ.ಎಸ್.ಐ. (ಸಿವಿಲ್), ಆರ್.ಎಂ.ಸಿ ಯಾರ್ಡ್ ಪೊಲೀಸ್ ಠಾಣೆ, ದಾವಣಗೆರೆ ಜಿಲ್ಲೆ ರವರು ಪಿ.ಎಸ್.ಐ ಹುದ್ದೆಗೆ ನೇಮಕಾತಿ ಹೊಂದಿ ದಿನಾಂಕ 01–09–2005ರಂದು ಕರ್ತವ್ಯಕ್ಕೆ ವರದಿ ಮಾಡಿಕೊಂಡಿದ್ದು, 21/2 ವರ್ಷಗಳ ಖಾಯಂಪೂರ್ವ ಅವಧಿಯನ್ನು ದಿನಾಂಕ: 29–02–2008ಕ್ಕೆ ಪೂರ್ಣಗೊಳಿಸಿರುತ್ತಾರೆ. ಸದರಿಯವರು ನಿಗಧಿತ ಇಲಾಖಾ ಪರೀಕ್ಷೆಯಾದ ಅಕೌಂಟ್ಸ್ ಹೈಯರ್‌ನಲ್ಲಿ ಉತ್ತೀರ್ಣರಾಗಿದ್ದು, ಕನ್ನಡ ಭಾಷಾ ಪರೀಕ್ಷೆಯನ್ನು ಪಾಸು ಮಾಡಲು ವಿನಾಯಿತಿ ಪಡೆದಿರುತ್ತಾರೆ. ಆದರೆ, ಬುನಾದಿ ತರಬೇತಿಯಲ್ಲಿ ಅಂತಿಮವಾಗಿ ನಡೆಸಿದ ರಿವಾಲ್ವರ್ ಶೂಟಿಂಗ್‌ನಲ್ಲಿ ಅನುತ್ತೀರ್ಣರಾಗಿದ್ದರಿಂದ ಐಜಿಪಿ, ಪೂರ್ವ ವಲಯ, ದಾವಣಗೆರೆ ರವರು ಕೆ.ಸಿ.ಎಸ್. ಪ್ರೊಬೇಷನ್) ನಿಯಮ 1977ರ ನಿಯಮಾವಳಿ 4(1)(ii) ರ ಮೇರೆಗೆ ದಿನಾಂಕ:01–03–2008 ರಿಂದ 01–06–2009 ರವರೆಗೆ ಖಾಯಂ ಪೂರ್ವ ಅವಧಿಯನ್ನು ವಿಸ್ತರಿಸಿ ಆದೇಶಿಸಿರುತ್ತಾರೆ.

ವಿಸ್ತರಿತ ಖಾಯಂಪೂರ್ವ ಅವಧಿಯಲ್ಲಿ, ಸದರಿ ಪಿಎಸ್‌ಐ ರವರು ಕೆ.ಪಿ.ಎ, ಮೈಸೂರಿನಲ್ಲಿ ದಿನಾಂಕ:06–07–2009 ರಂದು ನಡೆದ ರಿವಾಲ್ವರ್ ಶೂಟಿಂಗ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುತ್ತಾರೆ. ಸದರಿಯವರ ವಿರುದ್ಧ ಯಾವುದೇ ಚಾಲ್ತಿ ಶಿಕ್ಷೆ/ಇಲಾಖಾ ವಿಚಾರಣೆ ಹಾಗೂ ಕ್ರಿಮಿನಲ್ ಮೊಕದ್ದಮೆಗಳು ಇರುವುದಿಲ್ಲವಾದ ಕಾರಣ ಖಾಯಂಪೂರ್ವ ಅವಧಿಯನ್ನು ದಿನಾಂಕ: 01–06–2009 ರಿಂದ 05–07–2009 ರವರೆಗೆ ವಿಸ್ತರಿಸುವಂತೆ ಡಿಜಿ ಮತ್ತು ಐಜಿಪಿರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಒಇ 348 ಪೊಸಇ 2009, ಬೆಂಗಳೂರು, ದಿನಾಂಕ: 12ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನರಿ) ನಿಯಮಾವಳಿಗಳು, 1977ರ ನಿಯಮ 4(1)(i) ರನ್ವಯ ಶ್ರೀ ಪಿ.ಸೀತಾರಾಮ್, ಪ್ರೊ.ಪಿ.ಎಸ್.ಐ (ಸಿವಿಲ್), ಇವರ ಖಾಯಂ ಪೂರ್ವ ಅವಧಿಯನ್ನು ದಿನಾಂಕ: 01–06–2009 ರಿಂದ 05–07–2009ರ ವರೆಗೆ ವಿಸ್ತರಿಸಿ ಆದೇಶಿಸಿದೆ.

ವಿಸ್ತರಿಸಿರುವ ಪರಿವೀಕ್ಷಣಾ ಅವಧಿಗೆ ಕ.ನಾ.ಸೇ (ಪರಿವೀಕ್ಷಣೆ) ನಿಯಮಗಳು 1977ರ ನಿಯಮ 10ರ ಪ್ರಕಾರ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ಕಾಲ್ಪನಿಕವಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗದಿಪಡಿಸುವುದು. ಹೀಗೆ ನಿಗದಿಪಡಿಸಿದ ವೇತನದ ಬಾಕಿಯನ್ನು ನೀಡಲು ಅವಕಾಶವಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಪಿ.ಆರ್. 2566

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಕರ್ನಾಟಕ ನಾಗರೀಕ ಸೇವಾ ನಿಯಮ 285(4)ರಡಿಯಲ್ಲಿ ಸರ್ಕಾರಿ ನೌಕರರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ನಿವೃತ್ತಿಗೊಳಿಸುವ ಬಗ್ಗೆ.

**ಓದಲಾಗಿದೆ:** ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ ಸಿಬ್ಬಂದಿ–6 /45/2006–07 ದಿನಾಂಕ:15–10–2009.

**ಪ್ರಸ್ತಾವನೆ:**

ಆಡಳಿತ ಯಂತ್ರವನ್ನು ಹೆಚ್ಚು ಚುರುಕುಗೊಳಿಸಲು ಮತ್ತು ಸಾರ್ವಜನಿಕ ಹಿತದೃಷ್ಟಿಯಿಂದ ಸಾರ್ವಜನಿಕ ಹಿತಾಸಕ್ತಿಗೆ ಉಪಯುಕ್ತವಾಗುವಂತಹ ಹಂತವನ್ನು ಮೀರಿರುವ ಗ್ರೂಪ್ 'ಸಿ' ಮತ್ತು ಗ್ರೂಪ್ 'ಡಿ' ವೃಂದದ ಸರ್ಕಾರಿ ನೌಕರರನ್ನು ಕರ್ನಾಟಕ ನಾಗರಿಕ ಸೇವಾ ನಿಯಮಗಳ ನಿಯಮ 285(4) ರಡಿಯಲ್ಲಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಲು ವಲಯ ಮಟ್ಟದ ಉಪಸಮಿತಿಯನ್ನು ರಚಿಸಿದ್ದು, ಸದರಿ ಉಪ ಸಮಿತಿಗಳಲ್ಲಿ ಶಿಫಾರಸ್ಸು ಮಾಡಿರುವ ಈ ಕೆಳಕಂಡ ಸಿಬ್ಬಂದಿಗಳನ್ನು ಕಡ್ಡಾಯ ನಿವೃತ್ತಿಗೊಳಿಸಲು ಮೇಲೆ ಓದಲಾದ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಕೋರಿರುತ್ತಾರೆ.

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಒಇ 241 ಪೊಸಿಇ 2008, ಬೆಂಗಳೂರು, ದಿನಾಂಕ: 11ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ, ಈ ಕೆಳಕಂಡ ಹನ್ನೊಂದು (11) ನೌಕರರನ್ನು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಯ ನಿಯಮ 285(4)(ಬಿ) ರಡಿಯಲ್ಲಿ ಕೂಡಲೇ ಜಾರಿಗೆ ಬರುವಂತೆ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಲಾಗಿದೆ.

| ಕ್ರ. ಸಂ. | ಹೆಸರು, ಹುದ್ದೆ ಮತ್ತು ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ |
|---|---|
| 1 | ಶ್ರೀ ಶಿವಪ್ಪ, ಎಪಿಸಿ–6, ಡಿಎಆರ್. ಕೊಪ್ಪಳ ಜಿಲ್ಲೆ |
| 2 | ಶ್ರೀ ಆರ್.ಬಿ.ಕದಮ್, ಎಪಿಸಿ–100, ಬೆಳಗಾವಿ ಜಿಲ್ಲೆ |
| 3 | ಶ್ರೀ ಎನ್.ಎಲ್.ಪತ್ತೋತ್, ಸಿಎಚ್‌ಸಿ–635, ಬಿಜಾಪೂರ ಜಿಲ್ಲೆ |
| 4 | ಶ್ರೀ ಎಸ್.ಎಂ.ಮೇಲಿನಮನಿ, ಸಿಎಚ್‌ಸಿ–653, ಬಿಜಾಪೂರ ಜಿಲ್ಲೆ |
| 5 | ಶ್ರೀ ಆರ್.ಎಚ್.ವಾಗಮೋರ್, ಸಿಪಿಸಿ–663, ಬಿಜಾಪೂರ ಜಿಲ್ಲೆ |
| 6 | ಶ್ರೀ ಎಸ್.ಜಿ.ಜಾಗೀರದಾರ್, ಸಿಎಚ್‌ಸಿ–590, ಬಿಜಾಪೂರ ಜಿಲ್ಲೆ |
| 7 | ಶ್ರೀ ವಿ.ಕೆ.ಕುಲಕರ್ಣಿ, ಸಿಎಚ್‌ಸಿ–487, ಬಿಜಾಪೂರ ಜಿಲ್ಲೆ |
| 8 | ಶ್ರೀ ಎಸ್.ಬಿ.ಭಜಂತ್ರಿ, ಎಪಿಸಿ–232, ಬಿಜಾಪೂರ ಜಿಲ್ಲೆ |
| 9 | ಶ್ರೀ ಎಂ.ಮಹದೇವಸ್ವಾಮಿ, ಎಪಿಸಿ–119, ಮೈಸೂರು ಜಿಲ್ಲೆ |
| 10 | ಶ್ರೀ ಟಿ.ಕೆ.ಮಾದೇಗೌಡ, ಎಪಿಸಿ–53, ಮಂಡ್ಯ ಜಿಲ್ಲೆ |
| 11 | ಶ್ರೀ ಮಲ್ಲೇಶಪ್ಪ ಕೊಟನೂರು, ದಲಾಯತ್, ಗುಲ್ಬರ್ಗಾ ಜಿಲ್ಲೆ |

ಮುಂದುವರೆದು, ಇವರಿಗೆ ಕೂಡಲೇ ನಿವೃತ್ತಿಗೊಳಿಸಲು ಆದೇಶಿಸಿರುವ ಕಾರಣ, ಅಂಥ ನಿವೃತ್ತಿಯ ದಿನಾಂಕದಿಂದ 3 ತಿಂಗಳ ಅವಧಿಯವರೆಗೆ ನಿವೃತ್ತಿ ವೇತನಕ್ಕೆ ಬದಲಾಗಿ, ಪ್ರತಿ ತಿಂಗಳೂ, ನಿವೃತ್ತಿಯಾದ ದಿನಾಂಕದ ನಿಕಟ ಪೂರ್ವದಲ್ಲಿ ಪಡೆಯುತ್ತಿದ್ದ ವೇತನಕ್ಕೆ ಸಮನಾದ ಮೊತ್ತವನ್ನು ಪಡೆಯಲು ಅನುಮತಿ ನೀಡಲಾಗಿದೆ. ಸದರಿ ಅವಧಿಯಲ್ಲಿ ಇವರಿಗೆ ದೊರಕುವ ಯಾವುದೇ ವೇತನ ಬಡ್ತಿಯನ್ನು ಇವರಿಗೆ ಸಂದಾಯ ಮಾಡಲು ಹಾಗೂ ಇವರು ಅಂತಹ ವೇತನವನ್ನು ಪಡೆಯುತ್ತಿರುವ ವರೆಗಿನ ಸದರಿ ಅವಧಿಯನ್ನು ಕರ್ತವ್ಯವನ್ನಾಗಿ ಪರಿಗಣಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಆಇ 1 ಟಿಎಫ್‌ಪಿ 1996 ದಿನಾಂಕ: 10–07–1996ಐಟಂ 23ರನ್ವಯ ಅನುಮತಿಯನ್ನು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಪಿ.ಆರ್. 2567 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಆರ್.ವಾಸು ಪ್ರೊಬೇಷನರಿ ಪಿ.ಎಸ್.ಐ ರವರ ಖಾಯಂಪೂರ್ವ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** ಡಿಜಿ ಮತ್ತು ಐಜಿಪಿ, ಬೆಂಗಳೂರು ರವರ ಪತ್ರ ಸಂಖ್ಯೆ:ಸಿಬ್ಬಂದಿ–1/50/2009–10 ದಿನಾಂಕ:10.09.2009.

**ಪ್ರಸ್ತಾವನೆ:**

ಶ್ರೀ ಆರ್.ವಾಸು ಪ್ರೊ.ಪಿ.ಎಸ್.ಐ ರವರು 1994 ರಂದು ಕರ್ತವ್ಯಕ್ಕೆ ಸೇರಿ ಪ್ರಾಯೋಗಿಕ ತರಬೇತಿಯನ್ನು 25.10.1996 ರಲ್ಲಿ ಮುಗಿಸಿರುತ್ತಾರೆ. ಇಲಾಖಾ ಪರೀಕ್ಷೆಗಳಲ್ಲಿ 1994ರಲ್ಲಿ ತೇರ್ಗಡೆ ಹೊಂದಿರುತ್ತಾರೆ. ಸದರಿಯವರ ವಿರುದ್ಧ ಅಪರಾಧ ಮೊಕದ್ದಮೆ ಸಂಖ್ಯೆ:117/97ಕ್ಕೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆ ನಡೆದು ದಿನಾಂಕ: 31–07–2002 ರಂದು ಅವರ ವಾರ್ಷಿಕ ವೇತನ ಬಡ್ತಿಗಳನ್ನು 3 ವರ್ಷಗಳ ಕಾಲ ಮುಂದೂಡಿ ದಿನಾಂಕ: 06–06–1997 ರಿಂದ 04–02–1998 ರವರೆಗೆ ಇದ್ದ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಲಾಗಿದೆ. ಇದೇ ಪ್ರಕರಣಕ್ಕೆ ಸಂಬಂಧಿಸಿದಂತೆ ವಿಶೇಷ ನ್ಯಾಯಾಲಯ ಮೈಸೂರು ಇಲ್ಲಿನ ಸ್ಪೆಷಲ್ ಕೇಸ್ ನಂ.112/98ರಲ್ಲಿ 05–05–2009ರಲ್ಲಿ ನ್ಯಾಯಾಲಯವು ತೀರ್ಪು ನೀಡಿದ್ದು, ಇವರನ್ನು ದೋಷಮುಕ್ತಗೊಳಿಸಲಾಗಿದೆ.

ಇವರ ಪರಿವೀಕ್ಷಣಾ ಅವಧಿಯನ್ನು ಪೊಲೀಸ್ ಆಯುಕ್ತರು, ಮೈಸೂರು ನಗರ ರವರು ಕರ್ನಾಟಕ ಸೇವಾ (ಪರಿವೀಕ್ಷಣಾ/ನಿಯಮಗಳು, 1997ರ ನಿಯಮ 4(1)(ii) ರಂತೆ ಒಂದು ವರ್ಷ ಮೂರು ತಿಂಗಳು ಅಂದರೆ ದಿನಾಂಕ 16.05.1998 ವರೆಗೆ ವಿಸ್ತರಿಸಿರುತ್ತಾರೆ.

ಶ್ರೀ ಆರ್.ವಾಸು ರವರ ಪ್ರಸ್ತುತ ಕಾರ್ಯನಿರ್ವಹಣೆಯು ತೃಪ್ತಿಕರವಾಗಿರುತ್ತದೆಂದು ಹಾಗೂ ಸದರಿಯವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ/ನ್ಯಾಯಾಂಗ ನಡವಳಿ/ಕ್ರಿಮಿನಲ್ ಮೊಕದ್ದಮೆ/ಚಾಲ್ತಿ ಶಿಕ್ಷೆಯಾಗಲಿ ಇರುವುದಿಲ್ಲವೆಂದು, ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಗಳು, 1977ರ ನಿಯಮ 4 ಮತ್ತು 5 (1) ರನ್ವಯ ಇವರು ಹೊಂದಿರುವ ಕಾರ್ಯಭಾರ ನಿರ್ವಹಿಸಲು ಸಮರ್ಥರಾಗಿರುತ್ತಾರೆಂದು, ಹಾಗೂ ಇವರ ವಿರುದ್ಧದ ನ್ಯಾಯಾಲಯದ

ಪ್ರಕರಣದಲ್ಲಿ ಮೇಲ್ಮನವಿಯ ಅವಧಿಯು ಸಹ ಮುಗಿದಿರುತ್ತದೆಂದು ಡಿಜಿ ಮತ್ತು ಐಜಿಪಿ ರವರು ವರದಿ ಮಾಡಿ ಇವರ ಖಾಯಂ ಪೂರ್ವ ಅವಧಿಯನ್ನು ದಿನಾಂಕ 05–05–2009 ರವರೆಗೆ ವಿಸ್ತರಿಸಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಒಇ 315 ಪೊಸಿಇ 2006, ಬೆಂಗಳೂರು, ದಿನಾಂಕ: 12ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನರಿ) ನಿಯಮಾವಳಿಗಳು, 1977ರ ನಿಯಮ 4(1)(i) ರನ್ವಯ ಶ್ರೀ ಆರ್.ವಾಸು, ಪ್ರೊಬೇಷನರಿ ಪಿ.ಎಸ್.ಐ ಇವರ ಖಾಯಂ ಪೂರ್ವ ಅವಧಿಯನ್ನು ದಿನಾಂಕ 17–05–1998 ರಿಂದ 05–05–2009ರ ವರೆಗೆ ವಿಸ್ತರಿಸಿ ಆದೇಶಿಸಿದೆ.

ವಿಸ್ತರಿಸಿದ ಪರಿವೀಕ್ಷಣಾ ಅವಧಿಗೆ ಕ.ನಾ.ಸೇ (ಪರಿವೀಕ್ಷಣೆ) ನಿಯಮಗಳು 1977ರ ನಿಯಮ 10ರ ಪ್ರಕಾರ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ಕಾಲ್ಪನಿಕವಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗಧಿಪಡಿಸುವುದು. ಹೀಗೆ ನಿಗಧಿಪಡಿಸಿದ ವೇತನದ ಬಾಕಿಯನ್ನು ನೀಡಲು ಅವಕಾಶವಿರುವುದಿಲ್ಲ ಹಾಗೂ ಪರಿವೀಕ್ಷಣಾ ಅವಧಿಯನ್ನು ಘೋಷಿಸಿದ ನಂತರ ಮಾತ್ರ ವೇತನ ಮುಂಬಡ್ತಿ ಪಡೆಯಲು ನೌಕರರು ಅರ್ಹರಾಗುತ್ತಾರೆ. ವೇತನ ಮುಂಬಡ್ತಿ ಪಡೆಯಲು ಅರ್ಹರಾಗುವ ಮೊದಲು ವೇತನ ಮುಂಬಡ್ತಿಯನ್ನು ತಡೆಹಿಡಿಯುವ ದಂಡನೆಯನ್ನು ವಿಧಿಸುವಂತಿಲ್ಲ. ಪರಿವೀಕ್ಷಣಾ ಅವಧಿಯನ್ನು ಘೋಷಿಸಿದ ನಂತರ ಅವರ 3 ವೇತನ ಮುಂಬಡ್ತಿಗಳನ್ನು ತಡೆಹಿಡಿಯಲು ಕ್ರಮಕೈಗೊಳ್ಳಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಪಿ.ಆರ್. 2568

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ತಿದ್ದುಪಡಿ**

**ಸಂಖ್ಯೆ:ಒಇ 354 ಪೊಸಿಪ 2008, ಬೆಂಗಳೂರು, ದಿನಾಂಕ: 10ನೇ ನವೆಂಬರ್ 2009**

ಸರ್ಕಾರದ ಆದೇಶ ಸಂಖ್ಯೆ ಒಇ 347 ಪೊಸಿಪ 2007 ದಿನಾಂಕ: 07–11–2007ರ ಆದೇಶದ ಕ್ರಮ ಸಂಖ್ಯೆ.100ರಲ್ಲಿ "ಬಿ.ಸಿದ್ದಪ್ಪ" ಎಂಬುದರ ಬದಲಾಗಿ "ಟಿ.ಸಿದ್ದಪ್ಪ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಪಿ.ಆರ್. 2569

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಚನ್ನೇಶ್, ಪಿ.ಎಸ್.ಐ (ಸಿವಿಲ್)ರವರ ಖಾಯಂಪೂರ್ವ ಅವಧಿ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** ಡಿಜಿ ಮತ್ತು ಐಜಿಪಿ, ಬೆಂಗಳೂರು ರವರ ಪತ್ರ ಸಂಖ್ಯೆ:21ಸಿಬ್ಬಂದಿ–1/2009–10 ದಿನಾಂಕ:18–06–2009.

**ಪ್ರಸ್ತಾವನೆ:**

ಶ್ರೀ ಚನ್ನೇಶ್, ಪಿ.ಎಸ್.ಐ (ಸಿವಿಲ್) ರವರು ದಿನಾಂಕ 16–09–2003 ರಂದು ಸೇವೆಗೆ ಸೇರಿದ್ದು, $2^1/_2$ ವರ್ಷಗಳ ಪರೀಕ್ಷಾರ್ಥ ಅವಧಿಯು ದಿನಾಂಕ: 15–03–2006ರಂದು ಪೂರ್ಣಗೊಂಡಿದ್ದು, ಇಲಾಖಾ ಪರೀಕ್ಷೆ, ಅಕೌಂಟ್ಸ್ ಹೈಯರ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುತ್ತಾರೆ. ಕನ್ನಡ ಭಾಷೆ ಪರೀಕ್ಷೆಯಿಂದ ವಿನಾಯ್ತಿ ಪಡೆದಿರುತ್ತಾರೆ ಇವರಿಗೆ ಮೂಲ ತರಬೇತಿಯಲ್ಲಿ ನಿಗಧಿಪಡಿಸಿದ ಮನಃಶಾಸ್ತ್ರ ವಿಷಯದಲ್ಲಿ ಉತ್ತೀರ್ಣರಾಗಿಲ್ಲದ ಪ್ರಯುಕ್ತ ಐಜಿಪಿ, ಪಶ್ಚಿಮ ವಲಯ, ಮಂಗಳೂರು ರವರು ಕೆ.ಸಿ.ಎಸ್. (ಪ್ರೊಬೇಷನ್) ನಿಯಮ 1977ರ ನಿಯಮಾವಳಿ 4(1)(ii) ರ ಮೇರೆಗೆ ದಿನಾಂಕ 16–03–2006 ರಿಂದ 15–06–2007 ರವರೆಗೆ ಇವರ ಪರೀಕ್ಷಾರ್ಥ ಅವಧಿಯನ್ನು ವಿಸ್ತರಿಸಿರುತ್ತಾರೆ. ದಿನಾಂಕ 06–08–2007ರಿಂದ 16–08–2007ರ ವರೆಗೆ ನಡೆದ ಅನುಪೂರಕ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುವುದರಿಂದ ಹಾಗೂ ಇವರ ವಿರುದ್ಧ ಯಾವುದೇ ಚಾಲ್ತಿ ಶಿಕ್ಷೆ/ಇಲಾಖಾ ವಿಚಾರಣೆ/ವೇತನ ರಹಿತ ರಜೆ ಇರುವುದಿಲ್ಲವೆಂದು ದಿನಾಂಕ: 16–06–2007 ರಿಂದ 16–08–2007 ರವರೆಗೆ ಕೆ.ಸಿ.ಎಸ್ (ಪ್ರೊಬೇಷನ್) ನಿಯಮ 1977ರ ನಿಯಮಾವಳಿ 4(1)(i) ರನ್ವಯ ಇವರ ಪ್ರೊಬೇಷನರಿ ಅವಧಿಯನ್ನು ವಿಸ್ತರಿಸುವಂತೆ ಮೇಲೆ ಓದಲಾದ (1)ರ ಪತ್ರದಲ್ಲಿ ಡಿಜಿ ಮತ್ತು ಐಜಿಪಿ ರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಒಇ 222 ಪೊಸಿಇ 2009, ಬೆಂಗಳೂರು, ದಿನಾಂಕ: 10ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನರಿ) ನಿಯಮಾವಳಿಗಳು, 1977ರ ನಿಯಮ 4(1)(i) ರನ್ವಯ ಶ್ರೀ ಚನ್ನೇಶ್ ಪಿ.ಎಸ್.ಐ (ಸಿವಿಲ್) ಇವರ ಖಾಯಂ ಪೂರ್ವ ಅವಧಿಯನ್ನು ದಿನಾಂಕ 16–06–1997 ರಿಂದ 16–08–2007ರ ವರೆಗೆ ವಿಸ್ತರಿಸಿ ಆದೇಶಿಸಿದೆ.

ವಿಸ್ತರಿಸಿದ ಪರಿವೀಕ್ಷಣಾ ಅವಧಿಗೆ ಕ.ನಾ.ಸೇ (ಪರಿವೀಕ್ಷಣೆ) ನಿಯಮಗಳು 1977ರ ನಿಯಮ 10ರ ಪ್ರಕಾರ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ಕಾಲ್ಪನಿಕವಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗಧಿಪಡಿಸುವುದು. ಹೀಗೆ ನಿಗಧಿಪಡಿಸಿದ ವೇತನದ ಬಾಕಿಯನ್ನು ನೀಡಲು ಅವಕಾಶವಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಪಿ.ಆರ್. 2570 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಸರ್ವೋತ್ತಮ ಪೈ, ಡಿವೈ.ಎಸ್.ಪಿ. ಸಿ.ಐ.ಡಿ, ಬೆಂಗಳೂರು ರವರ ವಿರುದ್ಧ ಶಿಸ್ತಿನ ಕ್ರಮ ಜರುಗಿರುವ ಬಗ್ಗೆ.

**ಓದಲಾಗಿದೆ:** ಡಿಜಿ ಮತ್ತು ಐಜಿಪಿ, ರವರ ಪತ್ರ ಸಂಖ್ಯೆ:ಸಿಬಿ(5)/69/08–09, ದಿನಾಂಕ: 20–10–2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಜಿ.ಕೆ.ಶಿವಕುಮಾರ್, ಸೀನಿಯರ್ ಡಿವಿಷನಲ್ ಮ್ಯಾನೇಜರ್, ಓರಿಯೆಂಟಲ್ ಇನ್ಶ್ಯುರೆನ್ಸ್ ಕಂಪನಿ ಲಿಮಿಟೆಡ್, ಹಾಸನ ಇವರು ಶ್ರೀ ಸರ್ವೋತ್ತಮ ಪೈ, ಅಂದಿನ ಸಿ.ಪಿ.ಐ ಸಕಲೇಶಪುರ, ಹಾಲಿ ಡಿವೈ.ಎಸ್.ಪಿ. ಸಿ.ಐ.ಡಿ. ಬೆಂಗಳೂರು ವಿರುದ್ಧ ಕರ್ನಾಟಕ ಲೋಕಾಯುಕ್ತಕ್ಕೆ ದೂರನ್ನು ಸಲ್ಲಿಸಿ ದಿನಾಂಕ: 18–02–2002 ರಂದು ಸಕಲೇಶಪುರ ಗ್ರಾಮೀಣ ಪೊಲೀಸ್ ಠಾಣೆಯಲ್ಲಿ ದಾಖಲಾಗಿ ಮೊಕದ್ದಮೆ ಸಂಖ್ಯೆ:33/2002 ಕಲಂ 729,337 ಮತ್ತು 304(ಎ) ಐಪಿಸಿ ಪ್ರಕರಣದ ಎಫ್.ಐ.ಆರ್‌ನಲ್ಲಿ ಲಾರಿ ಚಾಲಕರ ಮತ್ತು ಲಾರಿಯಲ್ಲಿ ಕುಳಿತು ಪ್ರಯಾಣಿಸುತ್ತಿದ್ದ ಪ್ರಯಾಣಿಕರ ಪೈಕಿ ಪುಟ್ಟಮ್ಮ ಎಂಬುವವರು ಮೃತಪಟ್ಟಿರುವುದಾಗಿ ನಮೂದಿಸಿರುತ್ತಾರೆ. ಈ ಒಂದು ಅಂಶದಿಂದ ಮೃತಪಟ್ಟವರಿಗೆ ಮತ್ತು ಇತರೆ ಗಾಯಗೊಂಡ ಪ್ರಯಾಣಿಕರುಗಳಿಗೆ ಲಾರಿ ಮಾಲೀಕರು ಪರಿಹಾರಧನ ನೀಡಬೇಕಾಗಿದ್ದು, ಈ ಕಾರಣದಿಂದ ಲಾರಿ ಮಾಲೀಕರೊಡನೆ ಶಾಮೀಲಾಗಿ ಲಾರಿಯಲ್ಲಿ ಪ್ರಯಾಣಿಸುತ್ತಿದ್ದ ಪ್ರಯಾಣಿಕರಿಂದ ಬೇರೆ ಹೇಳಿಕೆಗಳನ್ನು ಪಡೆದು, ಇದು ದಾರಿಯಲ್ಲಿ ನಡೆದುಕೊಂಡು ಹೋಗುತ್ತಿದ್ದಾಗ ಆದ ಅಪಘಾತ ಎಂಬ ಅರ್ಥ ಬರುವ ಹಾಗೆ ದಾಖಲಾತಿಗಳನ್ನು ಸಿದ್ಧಪಡಿಸಿ ನ್ಯಾಯಾಲಯಕ್ಕೆ ದೋಷಾರೋಪಣೆ ಪತ್ರ ಸಲ್ಲಿಸಿರುತ್ತಾರೆ. ಹಾಗೂ ಇದರಿಂದ ಓರಿಯೆಂಟಲ್ ಇನ್ಶ್ಯುರೆನ್ಸ್ ಕಂಪನಿ ಲಿಮಿಟೆಡ್ ಇವರಿಗೆ ರೂ.50–00 ಲಕ್ಷಗಳ ನಷ್ಟವಾಗಿರುವುದಾಗಿ ಹೇಳಲಾಗಿದೆ. ಈ ಪ್ರಕರಣದ ಬಗ್ಗೆ ಉಪ ಲೋಕಾಯುಕ್ತ, ಕರ್ನಾಟಕ ರಾಜ್ಯ ಇವರು ಕರ್ನಾಟಕ ಲೋಕಾಯುಕ್ತ ಅಧಿನಿಯಮ ಕಲಂ 12(3) ರನ್ವಯ ವರದಿಯನ್ನು ಸಲ್ಲಿಸಿರುತ್ತಾರೆ. ಈ ವರದಿಯನ್ನು ಡಿಜಿ ಮತ್ತು ಐಜಿಪಿ ರವರಿಗೆ ಕಳುಹಿಸಿ ಅವರಿಂದ ವರದಿಯನ್ನು ಮತ್ತು ಕರಡು ದೋಷಾರೋಪಣೆ ಪಟ್ಟಿಯನ್ನು ಪಡೆಯಲಾಗಿದ್ದು, ಡಿಜಿ ಮತ್ತು ಐಜಿಪಿ ರವರು ಶ್ರೀ ಸರ್ವೋತ್ತಮ ಪೈ, ಡಿವೈ.ಎಸ್.ಪಿ. ಸಿ.ಐ.ಡಿ. ಬೆಂಗಳೂರು ಇವರ ವಿರುದ್ಧದ ಆರೋಪವು ಮೇಲ್ನೋಟಕ್ಕೆ ಸಾಬೀತಾಗಿರುವ ಹಿನ್ನೆಲೆಯಲ್ಲಿ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 6 ರಡಿಯಲ್ಲಿ ಇಲಾಖಾ ವಿಚಾರಣೆಗೆ ಆದೇಶಿಸಲು ಹಾಗೂ ಈ ಇಲಾಖಾ ವಿಚಾರಣೆಯನ್ನು ನಡೆಸಲು ಡಿ.ಐ.ಜಿ.ಪಿ. ಡಿ.ಸಿ.ಆರ್.ಇ ಬೆಂಗಳೂರು ಇವರನ್ನು ವಿಶೇಷ ಅಧಿಕಾರ ಹೊಂದಿದ ವಿಚಾರಣಾಧಿಕಾರಿಯನ್ನಾಗಿ ನೇಮಿಸಲು ಕೋರಿರುತ್ತಾರೆ.

ಪ್ರಸ್ತಾವನೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಒಇ 21 ಪೊಸಿಪ 2009, ಬೆಂಗಳೂರು, ದಿನಾಂಕ: 10ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಶ್ರೀ ಸರ್ವೋತ್ತಮ ಪೈ, ಡಿವೈ.ಎಸ್.ಪಿ. ಸಿ.ಐ.ಡಿ ಹಾಗೂ ಹಿಂದಿನ ಸಿ.ಪಿ.ಐ ಸಕಲೇಶಪುರ ರವರ ವಿರುದ್ಧ ಕೆ.ಎಸ್.ಪಿ (ಡಿ.ಪಿ) ನಿಯಮಾವಳಿಗಳು 1965ರ ನಿಯಮ 6ರಡಿಯಲ್ಲಿ ಇಲಾಖಾ ವಿಚಾರಣೆಗೆ ಆದೇಶಿಸಿದೆ. ಪ್ರಕರಣದಲ್ಲಿ ಡಿ.ಐ.ಜಿ.ಪಿ.ಡಿ.ಸಿ.ಆರ್.ಇ., ಬೆಂಗಳೂರು ರವರನ್ನು ವಿಶೇಷ ಅಧಿಕಾರ ಹೊಂದಿದ ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಈ ಸಂಬಂಧ ದೋಷಾರೋಪಣಾ ಪತ್ರವನ್ನು ಸಹ ಹೊರಡಿಸಲಾಗಿದೆ. ವಿಚಾರಣೆಯನ್ನು ನಿಯಮಾನುಸಾರ ನಡೆಸಿ ಮೂರು ತಿಂಗಳೊಳಗಾಗಿ ಮುಕ್ತಾಯಗೊಳಿಸಿ, ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಕಳುಹಿಸಿಕೊಡಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಪಿ.ಆರ್. 2571 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ತಿದ್ದುಪಡಿ**

**ಸಂಖ್ಯೆ:ಒಇ 541 ಪಿಪಿಇ 2008, ಬೆಂಗಳೂರು, ದಿನಾಂಕ: 13ನೇ ನವೆಂಬರ್ 2009**

ಸರ್ಕಾರದ ಆದೇಶ ಸಂಖ್ಯೆ ಒಇ 148 ಪಿಪಿಇ 2009 ದಿನಾಂಕ: 12–05–2008ರ ಅಧಿಸೂಚನೆಯ 3ನೇ ಸಾಲಿನಲ್ಲಿ "ಕರ್ನಾಟಕ ನಾಗರೀಕ ಸೇವಾ ನಿಯಮ 285(1)ರ ಅನ್ವಯ" ಎಂಬುದರ ಬದಲಾಗಿ "ಕರ್ನಾಟಕ ನಾಗರೀಕ ಸೇವಾ ನಿಯಮ 285(1)(ಎ)ರ ಅನ್ವಯ" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳುವುದು. ಉಳಿದಂತೆ ದಿನಾಂಕ: 12–05–2008ರ ಸರ್ಕಾರದ ಅಧಿಸೂಚನೆಯಲ್ಲಿ ಯಾವುದೇ ಬದಲಾವಣೆಗಳು ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಪಿ.ಆರ್. 2572

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಎಫ್.ಎ. ನೂರ್, ಸರ್ಕಾರಿ ಅಭಿಯೋಜಕರು, ವಿಶೇಷ ನ್ಯಾಯಾಲಯ, ಮಂಗಳೂರು ಇವರಿಗೆ ಸಂಯೋಜಿತ ರಜೆಯ ಮಂಜೂರಾತಿ ಕುರಿತು.

**ಓದಲಾಗಿದೆ:**
1. ಸದರಿ ಅಧಿಕಾರಿಯವರ ಮನವಿ ದಿನಾಂಕ: 02–03–2009 ಮತ್ತು 06–04–2009.
2. ಮಹಾಲೇಖಪಾಲಕರು, ಕರ್ನಾಟಕ, ಬೆಂಗಳೂರುರವರ ಪತ್ರಗಳ ಸಂ: ಜಿಇಬಿ/ಜೆ4/09–10/181, ದಿನಾಂಕ: 03–06–2009 ಮತ್ತು ಜಿಇಬಿ/ಜೆ4/09–10/397, ದಿನಾಂಕ: 22–07–2009.
3. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಸಿಶಾ–1/77/2008–09, ದಿನಾಂಕ: 03–08–2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 02–03–2009 ಮತ್ತು 06–04–2009ರ ಮನವಿಗಳಲ್ಲಿ ಶ್ರೀ ಎಫ್.ಎ. ನೂರ್, ಸರ್ಕಾರಿ ಅಭಿಯೋಜಕರು, ವಿಶೇಷ ನ್ಯಾಯಾಲಯ, ಮಂಗಳೂರು ರವರು ದಿನಾಂಕ:11–09–2008 ರಿಂದ 28–02–2009 (ಉಭಯ ದಿನಗಳನ್ನು ಸೇರಿ)ರವರೆಗೆ 60 ದಿನಗಳ ಪರಿವರ್ತಿತ ರಜೆಯನ್ನು ಮತ್ತು 111 ದಿನಗಳ ಗಳಿಕೆ ರಜೆಯನ್ನು ಒಟ್ಟು 171 ದಿನಗಳ ಸಂಯೋಜಿತ ರಜೆಯನ್ನು ವೈದ್ಯಕೀಯ ಕಾರಣಗಳ ಮೇಲೆ ಮಂಜೂರು ಮಾಡಬೇಕೆಂದು ಕೋರಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ: 03–06–2009 ಮತ್ತು 22–07–2009ರ ಪತ್ರದಲ್ಲಿ ಮಹಾಲೇಖಪಾಲಕರು, ಕರ್ನಾಟಕ, ಬೆಂಗಳೂರುರವರು ಸದರಿ ಅಧಿಕಾರಿಯ ಖಾತೆಯಲ್ಲಿ 120 ದಿನಗಳ ಗಳಿಕೆ ರಜೆಯ ಹಾಗೂ 119 ದಿನಗಳ ಅರ್ಧ ವೇತನ ರಜೆಯು ಜಮೆ ಇರುತ್ತದೆಂದು ತಿಳಿಸಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರುರವರ 03–08–2009ರ ಪತ್ರದಲ್ಲಿ ಶ್ರೀ ಎಫ್.ಎ. ನೂರ್, ಸರ್ಕಾರಿ ಅಭಿಯೋಜಕರವರು ರೂ.18150–26925 ವೇತನ ಶ್ರೇಣಿಯ ಸಮೂಹ 'ಎ' ಅಧಿಕಾರಿಯಾಗಿರುತ್ತಾರೆ. ಸದರಿಯವರು ಅನಾರೋಗ್ಯದ ಕಾರಣ ದಿನಾಂಕ: 11–09–2008 ರಿಂದ 25–09–2008ರವರೆಗೆ 15 ದಿನಗಳ ಪರಿವರ್ತಿತ ರಜೆಗೆ ಅನುಮತಿ ಪಡೆದಿದ್ದು, 26–09–2008ರಂದು ಕರ್ತವ್ಯಕ್ಕೆ ಹಾಜರಾಗದೆ, ವೈದ್ಯಕೀಯ ಕಾರಣದ ಮೇಲೆ ದಿನಾಂಕ:28–02–2009ರವರೆಗೆ ರಜೆಯನ್ನು ಮುಂದುವರೆಸಿರುತ್ತಾರೆ. ಈ ಸಂಬಂಧ ವೈದ್ಯಕೀಯ ಪ್ರಮಾಣ ಪತ್ರವನ್ನು ಸಲ್ಲಿಸಿರುತ್ತಾರೆ. ಆದ್ದರಿಂದ, ಸದರಿಯವರಿಗೆ ಮೇಲೆ (1) ಮತ್ತು (2)ರಲ್ಲಿ ಓದಲಾದ ಪತ್ರಗಳ ಹಿನ್ನೆಲೆಯಲ್ಲಿ, ದಿನಾಂಕ: 11–09–2008 ರಿಂದ 28–02–2009 (ಉಭಯ ದಿನಗಳನ್ನು ಸೇರಿ)ರವರೆಗೆ 59 ದಿನಗಳ ಪರಿವರ್ತಿತ ರಜೆ ಮತ್ತು 112 ದಿನಗಳ ಗಳಿಕೆ ರಜೆ ಸೇರಿ ಒಟ್ಟು 171 ದಿನಗಳ ಸಂಯೋಜಿತ ರಜೆಯನ್ನು ವೈದ್ಯಕೀಯ ಕಾರಣಗಳ ಮೇಲೆ ಮಂಜೂರು ಮಾಡಲು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಒಇ 364 ಪಿಪಿಇ 2009, ಬೆಂಗಳೂರು, ದಿನಾಂಕ: 12ನೇ ನವೆಂಬರ್ 2009**

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ ಶ್ರೀ ಎಫ್.ಎ. ನೂರ್, ಸರ್ಕಾರಿ ಅಭಿಯೋಜಕರು, ವಿಶೇಷ ನ್ಯಾಯಾಲಯ, ಮಂಗಳೂರು ಇವರು ಅನಾರೋಗ್ಯದ ನಿಮಿತ್ತ ಕರ್ತವ್ಯಕ್ಕೆ ಗೈರು ಹಾಜರಾದ ದಿನಾಂಕ: 11–09–2008 ರಿಂದ 28–02–2009 (ಉಭಯ ದಿನಗಳು ಸೇರಿ) ರವರೆಗಿನ 171 ದಿನಗಳ ಅವಧಿಗೆ ವೈದ್ಯಕೀಯ ನೆಲೆಯಲ್ಲಿ 59 ದಿನಗಳ ಪರಿವರ್ತಿತ ರಜೆ ಮತ್ತು 112 ದಿನಗಳ ಗಳಿಕೆ ರಜೆ ಸೇರಿ ಒಟ್ಟು 171 ದಿನಗಳ ಸಂಯೋಜಿತ ರಜೆಯನ್ನು ಮಂಜೂರು ಮಾಡಿದೆ.

ಇದನ್ನು ರಜಾ ಸಂಬಳ ಪ್ರಮಾಣಪತ್ರದಲ್ಲಿ ಅವಶ್ಯಕವಾಗಿ ನಮೂದನೆ ಮಾಡುವುದು.

ಸದರಿ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂ:ಒಸಾಇ 51605 ಆಂಆಸ 2009, ದಿನಾಂಕ:24–10–2009ರನ್ವಯ ಹಾಗೂ ಸರ್ಕಾರದ ಆದೇಶ ಸಂ: ಎಫ್‌ಡಿ 3 ಎಸ್‌ಆರ್‌ಎಸ್ 2008, ದಿನಾಂಕ:14.08.2008ರ ಖಂಡಿಕೆ 17.1ರಲ್ಲಿ ಕಲ್ಪಿಸಿರುವ ಅವಕಾಶದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

ಪಿ.ಆರ್. 2573

**ವಿಷಯ:** 2009–10ನೇ ಸಾಲಿನ ಪೊಲೀಸ್ ಆಧುನೀಕರಣ ಯೋಜನೆಯಡಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪತ್ರ ಸಂಖ್ಯೆ:1/ಎಡಿಜಿಪಿ/ಟಿಟಿಎಂ/ಎಂಡಿಎನ್/2009–10, ದಿನಾಂಕ: 21–10–2009.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 21–10–2009ರ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ, ಪೊಲೀಸ್ ಆಧುನೀಕರಣ ಯೋಜನೆ 2009–10ನೇ ಸಾಲಿಗೆ ಕರ್ನಾಟಕ ರಾಜ್ಯ ಪೊಲೀಸ್ ಇಲಾಖೆಗೆ ಎರಡನೇ ಕಂತಿನ ರೂಪದಲ್ಲಿ ರೂ.26,66,55,000/–ಗಳ ಅನುದಾನವನ್ನು ಕೇಂದ್ರ ಸರ್ಕಾರವು ತನ್ನ ಪತ್ರದ ಸಂಖ್ಯೆ:VI-21011/10/2009- PM-I ದಿನಾಂಕ:20–10–2009 ರಲ್ಲಿ ಬಿಡುಗಡೆ ಮಾಡಲಾಗಿದ್ದು, ಸದರಿ ಅನುದಾನವನ್ನು 2009–10ನೇ ಸಾಲಿನ ಕೇಂದ್ರ ಸರ್ಕಾರದಿಂದ ಅನುಮೋದಿತ ಕ್ರಿಯಾಯೋಜನೆಯನ್ವಯ ವಿವಿಧ ಕಾರ್ಯ ಚಟುವಟಿಕೆಗಳಿಗಾಗಿ ಉಪಯೋಗಿಸಿಕೊಳ್ಳಲು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪ್ರಸ್ತಾವನೆಯನ್ನು ಪರಿಶೀಲಿಸಿ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಹೆಚ್‌ಡಿ 01 ಪಿಎಫ್‌ಎಸ್ 2009, ಬೆಂಗಳೂರು, ದಿನಾಂಕ: 10ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೇಂದ್ರ ಸರ್ಕಾರವು ಪೊಲೀಸ್ ಆಧುನೀಕರಣ ಯೋಜನೆಯಡಿ 2009–10ನೇ ಸಾಲಿಗೆ ಮಂಜೂರು ಮಾಡಿರುವ 2ನೇ ಕಂತಿನ ಅನುದಾನ ರೂ.2666.50/–ಗಳನ್ನು (ಇಪ್ಪತ್ತಾರು ಕೋಟಿ ಅರವತ್ತಾರು ಲಕ್ಷದ ಐವತ್ತು ಸಾವಿರ ರೂಪಾಯಿಗಳು ಮಾತ್ರ) 2009–10ನೇ ಸಾಲಿನ ಕೇಂದ್ರ ಸರ್ಕಾರದಿಂದ ಅನುಮೋದಿತ ಕ್ರಿಯಾ ಯೋಜನೆಯನ್ವಯ ವಿವಿಧ ಕಾರ್ಯ ಚಟುವಟಿಕೆಗಳಿಗೆ ಉಪಯೋಗಿಸಿಕೊಳ್ಳಲು ಸರ್ಕಾರವು ಬಿಡುಗಡೆ ಮಾಡಿ ಆದೇಶಿಸಿದೆ.

ಸದರಿ ಅನುದಾನದ ದಿನಾಂಕ: 31–03–2009ರವರೆಗಿನ ಬಳಕೆ ಪ್ರಮಾಣ ಪತ್ರವನ್ನು ಕೂಡಲೇ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 622 ವೆಚ್ಚ–11/09 ದಿನಾಂಕ: 03–11–2009ರ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಜಿ.ಆರ್. ಶ್ರೀನಿವಾಸ ರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ),
ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ)

ಪಿ.ಆರ್. 2574

## REVENUE SECRETARIAT

**Sub:** Organization of Census of India 2011-Constitution of a State Level Census Co-ordination Committee-reg.

**Read:** D.O. Letter No.CEN/7/ORG/2009 dared 15th October, 2009 of the Director of Census operations, Karnataka, Bangalre.

**Preamble :**

The Director of Census Operations, Karnataka Bangalore has in his letter read above has stated that the 2011 Census in the State will be conducted in 2 phases viz. during the Houselisting & Housing Census in April, 2010 and the population Enumeration during February-March, according to a time schedule on a war footing, involving a huge network of activities to be undertaken by the various Department of the State Government. He has therefore, proposed constitution of a State Level Co-

ordination Committee with a view to view to ensure co-ordination among the various department of the State Government.

Hence the following order.

**Government Order No. RD 102 ETC 2009, Bangalore, dated: 31st October 2009**

Government is pleased to constitute a State Level Co-ordination Committee in Connection with the work of Census of India 2011, with immediate effect. The committee shall comprise the following members.

| | | |
|---|---|---|
| 1 | The Chief Secreatry to Government of Karnataka | Chair Person |
| 2 | The Additional Chief Secretary to Government of Karnataka | Member |
| 3 | The Principal Secretary to Government Home and Transport Department | Member |
| 4 | The Principal Secretary to Government Forest, Ecology and Environment Department | Member |
| 5 | The Principal Secretary to Government Finance Department | Member |
| 6 | The Secretary, Revenue Department, (Disaster Management) | Member |
| 7 | The Principal Secretary to Government Urban Development Department | Member |
| 8 | The Principal Secretary to Government Planning Department | Member |
| 9 | The Secretary to Government, Rural Development & Panchayat Raj Department | Member |
| 10 | Smt. Sobha Nambisan, I.A.S. Principal Secretary to Government Planning Economics & Statistics Department (Ex-Director of Census Operations, Karnataka, Banglore) | Member |
| 11 | Sri. H.Shashidhar, Managing Director State Beverages Corporation Ltd Karnataka (Ex-Director of Census Operations, Karnataka, Banglore) | Member |
| 12 | The Nodal Officers of Air, Force, Navy and Army (to be nominated by the Ministry of Defence) | Member |
| 13 | The Director of Census Operations, Karnataka, Bangalore. | Convenor |

2. The Committee Shall meet at least once in three months to review and coordinate the work related to the Census of India 2011 at different stages, Keeping in view the guidelines and instructions issued by the Registrar General and Census Commissioner, Government of India.

3. The committee may, if it so desires, nominate any person(s) as its member(s).

4. The Director of Census Operations in Karnataka shall be the convener of the Committee.

By order and in name of the Governor of Karnataka

**RAMACHANDRAIAH**

P.R. 2575

Under Secretary to Government,

Revenue Department (Disaster Management & Services-2)

## ತೋಟಗಾರಿಕೆ ಸಚಿವಾಲಯ

**ವಿಷಯ:** ಪಾವಗಡ ತಾಲ್ಲೂಕಿನ ರಾಜವಂತಿ ತೋಟಗಾರಿಕೆ ಕ್ಷೇತ್ರದಲ್ಲಿ ಕೃಷಿ ಸಂಶೋಧನಾ ಕೇಂದ್ರವನ್ನು ಸ್ಥಾಪಿಸಲು ಕೃಷಿ ವಿಶ್ವವಿದ್ಯಾಲಯಕ್ಕೆ ಜಮೀನು ನೀಡುವ ಬಗ್ಗೆ.

**ಓದಲಾಗಿದೆ:** 1) ಕೃಷಿ ಆಯುಕ್ತರ ಪತ್ರ ಸಂಖ್ಯೆ:ಕಾಸಂಘ/ರಾ.ಕೃ.ವಿ.ಯೋ/ಇತರೆ/2008–09 ದಿನಾಂಕ:09–02–2009

2) ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ:ತೋಇ/ತೋಅನಿ(ಕ್ಷೇ/ಸ)/ಸತೋಅ2/33/2007–08 ದಿನಾಂಕ:16–03–2009, 28–03–2009, 14–08–2009

3) ಸರ್ಕಾರದ ಪತ್ರ ಸಂಖ್ಯೆ: ಕೃತೋಇ 32 ತೋಇವಿ 2009 ಭಾಗ ದಿನಾಂಕ: 19–09–2009

4) ಸರ್ಕಾರದ ಆದೇಶ ಸಂಖ್ಯೆ: ವಾಕೈ 24 ರೇಯೋವಿ 2009 ದಿನಾಂಕ: 14–10–2009

5) ಸರ್ಕಾರದ ಆದೇಶ ಸಂಖ್ಯೆ: ವಾಕೈ 24 ರೇಯೋವಿ 2009 ದಿನಾಂಕ: 29–10–2009

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಕೃಷಿ ಆಯುಕ್ತರು, ಬೆಂಗಳೂರು ಇವರ ಪತ್ರದಲ್ಲಿ ತುಮಕೂರು ಜಿಲ್ಲೆ ಪಾವಗಡ ತಾಲ್ಲೂಕಿನಲ್ಲಿ ಕೃಷಿ ಸಂಶೋಧನಾ ಕೇಂದ್ರವನ್ನು ಸ್ಥಾಪಿಸಲು ಸರ್ಕಾರದ ಆದೇಶ ಸಂಖ್ಯೆ:AHD 135 AMS 2009 ದಿ:06.01.2009ರಲ್ಲಿ ಅನುಮೋದನೆ ದೊರೆತಿದ್ದು, ಈ ತಾಲ್ಲೂಕಿನಲ್ಲಿ ಕೃಷಿ ಸಂಶೋಧನಾ ಕೇಂದ್ರವನ್ನು ಸ್ಥಾಪಿಸಲು ತೋಟಗಾರಿಕೆ ಇಲಾಖೆಯ ರಾಜವಂತಿ ತೋಟಗಾರಿಕೆ ಕ್ಷೇತ್ರವು ಸೂಕ್ತವೆಂದು ನಿರ್ಣಯಿಸಿರುವುದರಿಂದ ಸದರಿ ಕ್ಷೇತ್ರದ ಕನಿಷ್ಠ ಅರ್ಧದಷ್ಟು ಸ್ಥಳವನ್ನು ವಿಶ್ವವಿದ್ಯಾಲಯ, ಬೆಂಗಳೂರು ಇವರಿಗೆ ಹಸ್ತಾಂತರಿಸಲು ರಿಜಿಸ್ಟ್ರಾರ್, ಕೃಷಿ ವಿಶ್ವವಿದ್ಯಾಲಯ, ಬೆಂಗಳೂರು ಇವರು ವಿನಂತಿಸಿರುತ್ತಾರೆ ಎಂದು ವರದಿ ಮಾಡಿರುತ್ತಾರೆ. ಮೇಲೆ ಓದಲಾದ (2)ರ ತೋಟಗಾರಿಕೆ ನಿರ್ದೇಶಕರ ಪತ್ರದಲ್ಲಿ ಸದರಿ ಪ್ರಸ್ತಾವನೆ ನಕ್ಷೆಯಲ್ಲಿ ಗುರುತಿಸಿರುವ 10 ಎಕರೆ ಪ್ರದೇಶವನ್ನು ಕೃಷಿ ವಿಶ್ವವಿದ್ಯಾಲಯ, ಬೆಂಗಳೂರು ಇವರಿಗೆ ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಅಭಿವೃದ್ಧಿ ಆಯುಕ್ತರು ಹಾಗೂ KSHDA ಅಧ್ಯಕ್ಷರ ಅನುಮತಿ ಹಾಗೂ ಕಂದಾಯ ಇಲಾಖೆ ಸಹಮತಿಯೊಂದಿಗೆ ನೀಡಬಹುದು ಎಂದು ಅಭಿಪ್ರಾಯವನ್ನು ಸಲ್ಲಿಸಿರುತ್ತಾರೆ. ಈ ಬಗ್ಗೆ ಸರ್ಕಾರದ ಹಂತದಲ್ಲಿ ಪರಿಶೀಲಿಸಲಾಗಿ ಓದಲಾದ (3)ರಲ್ಲಿ ಪತ್ರದಲ್ಲಿ ಚಿಂತಾಮಣಿ ತಾಲ್ಲೂಕಿನ ರೇಷ್ಮೆ ಇಲಾಖೆಗೆ ಸೇರಿದ ಮಾದಿಕೆರೆ ರೇಷ್ಮೆ ಪ್ರದೇಶದ 10.00 ಎಕರೆ ಜಮೀನು ಹಾಗೂ ಊಟಿಯಲ್ಲಿನ 15.00 ಎಕರೆ ಜಮೀನನ್ನು ತೋಟಗಾರಿಕೆ ಇಲಾಖೆಗೆ ವಹಿಸುವಂತೆ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯನ್ನು ಕೋರಲಾಗಿರುತ್ತದೆ. ಅದರಂತೆ ಓದಲಾದ (4)ರಲ್ಲಿ ಚಿಂತಾಮಣಿ ತಾಲ್ಲೂಕಿನ ರೇಷ್ಮೆ ಇಲಾಖೆಗೆ ಸೇರಿದ ಮಾದಿಕೆರೆ ರೇಷ್ಮೆ ಕೃಷಿ ಕ್ಷೇತ್ರದ ಸರ್ವೆ ನಂ. 194ರಲ್ಲಿರುವ 18ಎಕರೆ ಜಮೀನಿನಲ್ಲಿ 10.00 ಎಕರೆ ಪ್ರದೇಶವನ್ನು ತೋಟಗಾರಿಕೆ ಇಲಾಖೆಗೆ ಹಸ್ತಾಂತರಿಸಲಾಗಿದೆ. ಓದಲಾದ (5)ರಲ್ಲಿ ಊಟಿಯಲ್ಲಿನ ರೇಷ್ಮೆ ಇಲಾಖೆಗೆ ಸೇರಿದ ಸರ್ವೆ ನಂ.55, 47 ಮತ್ತು 67ರಲ್ಲಿನ 15.00 ಎಕರೆ ಜಮೀನಿನಲ್ಲಿ 8.00 ಎಕರೆ ಜಮೀನನ್ನು ತೋಟಗಾರಿಕೆ ಇಲಾಖೆಗೆ ಹಸ್ತಾಂತರಿಸಲಾಗಿದೆ. ಅದರಂತೆ ತೋಟಗಾರಿಕೆ ಇಲಾಖೆಗೆ ಜಮೀನನ್ನು ಕೃಷಿ ವಿಶ್ವವಿದ್ಯಾಲಯಕ್ಕೆ ಹಸ್ತಾಂತರಿಸುವ ಬಗ್ಗೆ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ ಕೃತೋಇ 32 ತೋಇವಿ 2009 (ಭಾಗ) ಬೆಂಗಳೂರು, ದಿನಾಂಕ: 10ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ತಿಳಿಸಿರುವ ವಿವರಣೆಗಳ ಹಿನ್ನೆಲೆಯಲ್ಲಿ ತುಮಕೂರು ಜಿಲ್ಲೆ ಪಾವಗಡ ತಾಲ್ಲೂಕಿನ ರಾಜವಂತಿ ತೋಟಗಾರಿಕೆ ಕ್ಷೇತ್ರದ ಒಟ್ಟು 32.00 ಎಕರೆ ಪ್ರದೇಶದಲ್ಲಿ 10.00 ಎಕರೆ ಪ್ರದೇಶವನ್ನು ಕೃಷಿ ಸಂಶೋಧನಾ ಕೇಂದ್ರ ಸ್ಥಾಪಿಸಲು ಕೃಷಿ ವಿಶ್ವವಿದ್ಯಾಲಯ, ಬೆಂಗಳೂರು ಇವರಿಗೆ ಹಸ್ತಾಂತರಿಸಲು ಸರ್ಕಾರವು ಮಂಜೂರಾತಿಯನ್ನು ನೀಡಲಾಗಿದೆ.

ಈ ಆದೇಶವನ್ನು ಕಂದಾಯ ಇಲಾಖೆಯ ಟಿಪ್ಪಣಿ ಸಂಖ್ಯೆ:ಕಂಇ 11 ಎಲ್‌ಜಿಟಿ 2009 ದಿನಾಂಕ: 16–05–2009ರ ಅನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2586

**ಎಸ್. ರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ, ತೋಟಗಾರಿಕೆ ಇಲಾಖೆ.

## ವಸತಿ ಸಚಿವಾಲಯ

**ವಿಷಯ:** ಪ್ರವಾಹಪೀಡಿತರಿಗೆ ಮನೆ ನಿರ್ಮಿಸಿಕೊಳ್ಳಲು ನಿವೇಶನ ಖರೀದಿಗಾಗಿ ಅನುದಾನ ಬಿಡುಗಡೆ ಕುರಿತು.

**ಓದಲಾಗಿದೆ:** 1) ಮುಖ್ಯ ಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿ ಸಂ. ಮುಮಕಾ 4123/2009 ದಿನಾಂಕ:28.10.2009

2) ಸರ್ಕಾರದ ಆದೇಶ ಸಂ. ವಇ 16 ಹೆಚ್‌ಎವ್ಯೆ 2009 ದಿನಾಂಕ: 14.10.2009

3) ಸರ್ಕಾರದ ಆದೇಶ ಸಂ. ವಇ 16 ಹೆಚ್‌ಎವ್ಯೆ 2009 ದಿನಾಂಕ: 22.10.2009

**ಪ್ರಸ್ತಾವನೆ:**

ಉತ್ತರ ಕರ್ನಾಟಕ ಜಿಲ್ಲೆಗಳಲ್ಲಿ ದಿನಾಂಕ: 29–09–2009 ರಿಂದ 4–10–20–2009ರವರೆಗೆ ಸುರಿದ ಧಾರಾಕಾರ ಮಳೆಯಿಂದಾಗಿ ಉಂಟಾದ ನೆರೆಹಾವಳಿಯಿಂದ ಲಕ್ಷಾಂತರ ಜನರ ಮನೆಗಳು, ಬೆಳೆ ಮತ್ತು ಸಾರ್ವಜನಿಕ ಆಸ್ತಿಪಾಸ್ತಿ ತೀವ್ರ ಹಾನಿಗೊಳಗಾಗಿವೆ. ಪ್ರವಾಹಪೀಡಿತರನ್ನು ತಾತ್ಕಾಲಿಕವಾಗಿ ನಿರ್ಮಿಸಿದ ಶೆಡ್ಡುಗಳಲ್ಲಿ ವ್ಯವಸ್ಥೆ ಮಾಡಲಾಗಿದ್ದು. ಮಣ್ಣಿನ ಇಟ್ಟಿಗೆಗಳಿಂದ ನಿರ್ಮಿಸಲಾದ ಈ ಮನೆಗಳ ದುರಸ್ಥಿ ಸಾಧ್ಯವಾಗುತ್ತಿಲ್ಲ. ಹಾನಿಗೊಳಗಾದ ಮನೆಗಳು ಹೆಚ್ಚಾಗಿ ತಗ್ಗು ಪ್ರದೇಶದಲ್ಲಿರುವುದರಿಂದ ಅವರಿಗೆ ಪ್ರತ್ಯೇಕವಾಗಿ ಸುರಕ್ಷಿತ ಸ್ಥಳದಲ್ಲಿ ಮನೆಗಳನ್ನು ನಿರ್ಮಿಸಲು ಸೂಕ್ತ ನಿವೇಶನಗಳ ಅವಶ್ಯಕತೆ ಇರುತ್ತದೆ. ಈ ಹಿನ್ನೆಲೆಯಲ್ಲಿ ಸರ್ಕಾರವು ಹೆಚ್ಚು ಹಾನಿಗೊಳಗಾದ ರಾಜ್ಯದ ಹತ್ತು ಜಿಲ್ಲೆಗಳಲ್ಲಿ ಮನೆಗಳ ನಿರ್ಮಾಣಕ್ಕಾಗಿ ನಿವೇಶನಗಳನ್ನು ರಚಿಸಲು ಖಾಸಗಿ ಜಮೀನು ಖರೀದಿಗಾಗಿ ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ 20.00ಕೋಟಿ ರೂ.ಗಳ ಅನುದಾನವನ್ನು ಹಾಗೂ ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಗದಗ ಜಿಲ್ಲೆ 10.00ಕೋಟಿ ರೂ.ಗಳನ್ನು ಬಿಡುಗಡೆ

ಮಾಡಿದ್ದು. ಈಗ ಬಾಗಲಕೋಟೆ ಜಿಲ್ಲೆಗೆ 8.00 ಕೋಟಿ ರೂ.ಗಳ ಅನುದಾನ ಬಿಡುಗಡೆ ಮಾಡಲು ಈ ಕೆಳಗಿನಂತೆ ಆದೇಶವನ್ನು ಪ್ರಸ್ತಾಪಿಸಿದೆ.

**ಸರ್ಕಾರದ ಆದೇಶ ಸಂ ವಇ 16 ಹೆಚ್‌ಎವೈ 2009, ಬೆಂಗಳೂರು, ದಿನಾಂಕ: 31ನೇ ಅಕ್ಟೋಬರ್ 2009**

ಇತ್ತೀಚೆಗೆ ಉಂಟಾದ ನೆರೆಹಾವಳಿಯಿಂದ ಮನೆಗಳನ್ನು ಕಳೆದುಕೊಂಡು ತೊಂದರೆಗೊಳಗಾದವರಿಗೆ ಮನೆಗಳ ನಿರ್ಮಾಣಕ್ಕಾಗಿ ನಿವೇಶನಗಳಿಗಾಗಿ ಜಮೀನು ಖರೀದಿಸಲು ಬಾಗಲಕೋಟೆ ಜಿಲ್ಲೆಗೆ ಲೆಕ್ಕಶೀರ್ಷಿಕೆ 2216–03–102–0–01–059 (ಯೋಜನೆ) ಅಡಿಯಲ್ಲಿ 6.00 ಕೋಟಿ ರೂ.ಗಳನ್ನು ಹಾಗೂ ಲೆಕ್ಕಶೀರ್ಷಿಕೆ 2216–03–102–0–01–133 (ಯೋಜನೆ) ಅಡಿಯಲ್ಲಿ 2.00 ಕೋಟಿ ರೂ.ಗಳನ್ನು ಹೀಗೆ ಒಟ್ಟು 8.00 ಕೋಟಿ ರೂ.ಗಳನ್ನೂ (ಎಂಟು ಕೋಟಿ ರೂ.ಗಳು ಮಾತ್ರ) ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮಕ್ಕೆ ಸರ್ಕಾರದ ಉಪ ಕಾರ್ಯದರ್ಶಿ, ವಸತಿ ಇಲಾಖೆ ಇವರ ಮೇಲು ರುಜುವಿನೊಂದಿಗೆ ಪಡೆಯಲು, ಬಿಡುಗಡೆ ಮಾಡಲಾಗಿದೆ.

2) ನೆರೆಹಾವಳಿಯಿಂದ ತೊಂದರೆಗೊಳಗಾದವರಿಗೆ, ಮನೆ ನಿರ್ಮಾಣಕ್ಕಾಗಿ ಹಂಚುವ ನಿವೇಶನಗಳಿಗಾಗಿ ಜಮೀನು ಖರೀದಿಸಲು ಮಾತ್ರ ಈ ಅನುದಾನವನ್ನು ಉಪಯೋಗಿಸಿಕೊಳ್ಳತಕ್ಕದ್ದು.

3) ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ/682/ವೆಚ್ಚ–9/09 ದಿನಾಂಕ: 30–10–2009ರಲ್ಲಿ ಸಹಮತಿಸಿದ ಮೇರೆಗೆ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2591

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ.

**ವಿಷಯ:** ಪ್ರವಾಹಪೀಡಿತರಿಗೆ ಮನೆ ನಿರ್ಮಿಸಿಕೊಳ್ಳಲು ಜಮೀನು ಖರೀದಿಗಾಗಿ ಅನುದಾನ ಬಿಡುಗಡೆ ಕುರಿತು.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂ. ವಇ 16 ಹೆಚ್‌ಎವೈ 2009 ದಿನಾಂಕ: 14–10–2009
2) ಸರ್ಕಾರದ ಆದೇಶ ಸಂ. ವಇ 16 ಹೆಚ್‌ಎವೈ 2009 ದಿನಾಂಕ: 22–10–2009
3) ಸರ್ಕಾರದ ಆದೇಶ ಸಂ. ವಇ 16 ಹೆಚ್‌ಎವೈ 2009 ದಿನಾಂಕ: 31–10–2009
4) ಸರ್ಕಾರದ ಆದೇಶ ಸಂ. ವಇ 17 ಹೆಚ್‌ಎಹೆಚ್ 2009 ದಿನಾಂಕ: 16–07–2009

**ಪ್ರಸ್ತಾವನೆ:**

ಉತ್ತರ ಕರ್ನಾಟಕ ಜಿಲ್ಲೆಗಳಲ್ಲಿ ದಿನಾಂಕ: 29–09–2009ರಿಂದ 4–10–20–2009ರವರೆಗೆ ಸುರಿದ ಧಾರಾಕಾರ ಮಳೆಯಿಂದಾಗಿ ಉಂಟಾದ ನೆರೆಹಾವಳಿಯಿಂದ ಲಕ್ಷಾಂತರ ಜನರ ಮನೆಗಳು, ಬೆಳೆ ಮತ್ತು ಸಾರ್ವಜನಿಕ ಆಸ್ತಿಪಾಸ್ತಿ ತೀವ್ರ ಹಾನಿಗೊಳಗಾಗಿವೆ. ಪ್ರವಾಹಪೀಡಿತರನ್ನು ತಾತ್ಕಾಲಿಕವಾಗಿ ನಿರ್ಮಿಸಿದ ಶೆಡ್ಡುಗಳಲ್ಲಿ ವ್ಯವಸ್ಥೆ ಮಾಡಲಾಗಿದ್ದು. ಮಣ್ಣಿನ ಇಟ್ಟಿಗೆಗಳಿಂದ ನಿರ್ಮಿಸಲಾದ ಈ ಮನೆಗಳ ದುರಸ್ಥಿ ಸಾಧ್ಯವಾಗುತ್ತಿಲ್ಲ. ಹಾನಿಗೊಳಗಾದ ಮನೆಗಳು ಹೆಚ್ಚಾಗಿ ತಗ್ಗು ಪ್ರದೇಶದಲ್ಲಿರುವುದರಿಂದ ಅವರಿಗೆ ಪ್ರತ್ಯೇಕವಾಗಿ ಸುರಕ್ಷಿತ ಸ್ಥಳದಲ್ಲಿ ಮನೆಗಳನ್ನು ನಿರ್ಮಿಸಲು ಸೂಕ್ತ ನಿವೇಶನಗಳ ಅವಶ್ಯಕತೆ ಇರುತ್ತದೆ. ಈ ಹಿನ್ನೆಲೆಯಲ್ಲಿ ಸರ್ಕಾರವು ಹೆಚ್ಚು ಹಾನಿಗೊಳಗಾದ ರಾಜ್ಯದ ಹತ್ತು ಜಿಲ್ಲೆಗಳಲ್ಲಿ ಮನೆಗಳ ನಿರ್ಮಾಣಕ್ಕಾಗಿ ನಿವೇಶನಗಳನ್ನು ರಚಿಸಲು ಖಾಸಗಿ ಜಮೀನು ಖರೀದಿಗಾಗಿ ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ 20.00ಕೋಟಿ ರೂ.ಗಳ ಅನುದಾನವನ್ನು ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಗದಗ ಜಿಲ್ಲೆ 10.00ಕೋಟಿ ರೂ.ಗಳನ್ನು ಹಾಗೂ ಮೇಲೆ (3)ರಲ್ಲಿ ಓದಲಾದ ಆದೇಶದಲ್ಲಿ ಬಾಗಲಕೋಟೆ ಜಿಲ್ಲೆಗೆ 8.00 ಕೋಟಿ ರೂ.ಗಳನ್ನು ಹೀಗೆ ಒಟ್ಟು 38 ಕೋಟಿ ರೂ.ಗಳನ್ನು ಬಿಡುಗಡೆ ಮಾಡಲಾಗಿದೆ. ಈಗ ರಾಯಚೂರು ಬಿಜಾಪುರ ಕೊಪ್ಪಳ ಮತ್ತು ದಾವಣಗೆರೆ ಜಿಲ್ಲೆಗಳಿಗೆ ಈಗಾಗಲೇ ಮೇಲೆ (4)ರಲ್ಲಿ ಓದಲಾದ ಆದೇಶದಲ್ಲಿ ನಗರ ಆಶ್ರಯ ವಸತಿ ನಿವೇಶನ ಯೋಜನೆಗಾಗಿ ಬಿಡುಗಡೆ ಮಾಡಿರುವ ಅನುದಾನವನ್ನು ಪ್ರವಾಹಪೀಡಿತರಿಗೆ ಮನೆ ನಿರ್ಮಿಸಿಕೊಳ್ಳಲು ಜಮೀನು ಖರೀದಿಗಾಗಿ ಉಪಯೋಗಿಸಿಕೊಳ್ಳಲು ಈ ಕೆಳಗಿನಂತೆ ಆದೇಶವನ್ನು ಪ್ರಸ್ತಾಪಿಸಿದೆ.

**ಸರ್ಕಾರದ ಆದೇಶ ಸಂ ವಇ 16 ಹೆಚ್‌ಎವೈ 2009, ಬೆಂಗಳೂರು, ದಿನಾಂಕ: 2ನೇ ನವೆಂಬರ್ 2009**

ಇತ್ತೀಚೆಗೆ ಉಂಟಾದ ನೆರೆಹಾವಳಿಯಿಂದ ಮನೆಗಳನ್ನು ಕಳೆದುಕೊಂಡು ತೊಂದರೆಗೊಳಗಾದವರಿಗೆ ಮನೆಗಳ ನಿರ್ಮಾಣಕ್ಕಾಗಿ ನಿವೇಶನಗಳಿಗಾಗಿ ಜಮೀನು ಖರೀದಿಸಲು ರಾಯಚೂರು ಜಿಲ್ಲೆಗೆ 7.00 ಕೋಟಿ ರೂ.ಗಳನ್ನೂ ಬಿಜಾಪುರ ಜಿಲ್ಲೆಗೆ 5.00 ಕೋಟಿ ರೂ.ಗಳನ್ನು ಕೊಪ್ಪಳ ಜಿಲ್ಲೆಗೆ 3.00 ಕೋಟಿ ರೂ.ಗಳನ್ನು ಹಾಗೂ ದಾವಣಗೆರೆ ಜಿಲ್ಲೆಗೆ 1.00 ಕೋಟಿ ರೂ.ಗಳನ್ನು ಹೀಗೆ ಒಟ್ಟು 16.00 ಕೋಟಿ ರೂ.ಗಳನ್ನು (ಹದಿನಾರು ಕೋಟಿ ರೂ.ಗಳು ಮಾತ್ರ) ಈಗಾಗಲೇ ಜುಲೈ 2009ರಲ್ಲಿ ಲೆಕ್ಕಶೀರ್ಷಿಕೆ 2216–03–102–0–01ರಲ್ಲಿ ಬಿಡುಗಡೆ ಮಾಡಿರುವ ಮೊತ್ತದಿಂದ ಉಪಯೋಗಿಸಿಕೊಳ್ಳಲು ಸರ್ಕಾರದ ನಿರ್ದೇಶನ ನೀಡಲಾಗಿದೆ.

2) ನೆರೆಹಾವಳಿಯಿಂದ ತೊಂದರೆಗೊಳಗಾದವರಿಗೆ, ಮನೆ ನಿರ್ಮಾಣಕ್ಕಾಗಿ ಹಂಚುವ ನಿವೇಶನಗಳಿಗಾಗಿ ಜಮೀನು ಖರೀದಿಸಲು ಮಾತ್ರ ಈ ಅನುದಾನವನ್ನು ಉಪಯೋಗಿಸಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2592 **ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ.

**ವಿಷಯ:** ಪ್ರವಾಹಪೀಡಿತರಿಗೆ ಮನೆ ನಿರ್ಮಿಸಿಕೊಳ್ಳಲು ನಿವೇಶನ ಖರೀದಿಗಾಗಿ ಅನುದಾನ ಬಿಡುಗಡೆ ಕುರಿತು.

**ಓದಲಾಗಿದೆ:** 1) ಅನಧಿಕೃತ ಟಿಪ್ಪಣಿ ಸಂಖ್ಯೆ ಎಫ್‌ಡಿ/682/ವೆಚ್ಚ–9/2008 ದಿನಾಂಕ: 20–10–2009

2) ಸರ್ಕಾರದ ಆದೇಶ ಸಂ. ವಇ 16 ಹೆಚ್‌ಎವೈ 2009 ದಿನಾಂಕ: 14–10–2009

**ಪ್ರಸ್ತಾವನೆ:**

ಉತ್ತರ ಕರ್ನಾಟಕ ಜಿಲ್ಲೆಗಳಲ್ಲಿ ದಿನಾಂಕ: 29–09–2009ರಿಂದ 4–10–20–2009ರವರೆಗೆ ಸುರಿದ ಧಾರಾಕಾರ ಮಳೆಯಿಂದಾಗಿ ಉಂಟಾದ ನೆರೆಹಾವಳಿಯಿಂದ ಲಕ್ಷಾಂತರ ಜನರ ಮನೆಗಳು, ಬೆಳೆ ಮತ್ತು ಸಾರ್ವಜನಿಕ ಆಸ್ತಿಪಾಸ್ತಿ ತೀವ್ರ ಹಾನಿಗೊಳಗಾಗಿವೆ. ಪ್ರವಾಹಪೀಡಿತರನ್ನು ತಾತ್ಕಾಲಿಕವಾಗಿ ನಿರ್ಮಿಸಿದ ಶೆಡ್ಡುಗಳಲ್ಲಿ ವ್ಯವಸ್ಥೆ ಮಾಡಲಾಗಿದ್ದು. ಮಣ್ಣಿನ ಇಟ್ಟಿಗೆಗಳಿಂದ ನಿರ್ಮಿಸಲಾದ ಈ ಮನೆಗಳ ದುರಸ್ಥಿ ಸಾಧ್ಯವಾಗುತ್ತಿಲ್ಲ. ಹಾನಿಗೊಳಗಾದ ಮನೆಗಳು ಹೆಚ್ಚಾಗಿ ತಗ್ಗು ಪ್ರದೇಶದಲ್ಲಿರುವುದರಿಂದ ಅವರಿಗೆ ಪ್ರತ್ಯೇಕವಾಗಿ ಸುರಕ್ಷಿತ ಸ್ಥಳದಲ್ಲಿ ಮನೆಗಳನ್ನು ನಿರ್ಮಿಸಲು ಸೂಕ್ತ ನಿವೇಶನಗಳ ಅವಶ್ಯಕತೆ ಇರುತ್ತದೆ. ಈ ಹಿನ್ನೆಲೆಯಲ್ಲಿ ಸರ್ಕಾರವು ಹೆಚ್ಚು ಹಾನಿಗೊಳಗಾದ ರಾಜ್ಯದ ಹತ್ತು ಜಿಲ್ಲೆಗಳಲ್ಲಿ ಮನೆಗಳ ನಿರ್ಮಾಣಕ್ಕಾಗಿ ನಿವೇಶನಗಳನ್ನು ರಚಿಸಲು ಖಾಸಗಿ ಜಮೀನು ಖರೀದಿಗಾಗಿ ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ 20.00ಕೋಟಿ ರೂ.ಗಳ ಅನುದಾನವನ್ನು ಬಿಡುಗಡೆ ಮಾಡಿದ್ದು, ಗದಗ ಜಿಲ್ಲೆಗೆ ಇನ್ನೂ 10.00 ಕೋಟಿ ರೂ.ಗಳ ಅನುದಾನ ಬಿಡುಗಡೆ ಮಾಡಲು ಈ ಕೆಳಗಿನಂತೆ ಆದೇಶವನ್ನು ಪ್ರಸ್ತಾಪಿಸಿದೆ.

**ಸರ್ಕಾರದ ಆದೇಶ ಸಂ ವಇ 16 ಹೆಚ್‌ಎವೈ 2009, ಬೆಂಗಳೂರು, ದಿನಾಂಕ: 22ನೇ ಅಕ್ಟೋಬರ್ 2009**

ಇತ್ತೀಚೆಗೆ ಉಂಟಾದ ನೆರೆಹಾವಳಿಯಿಂದ ಮನೆಗಳನ್ನು ಕಳೆದುಕೊಂಡು ತೊಂದರೆಗೊಳಗಾದವರಿಗೆ ಮನೆಗಳ ನಿಮಾರ್ಣಕ್ಕಾಗಿ ನಿವೇಶನಗಳಿಗಾಗಿ ಜಮೀನು ಖರೀದಿಸಲು ಗದಗ ಜಿಲ್ಲೆಗೆ (ಆಬ್ಜೆಕ್ಟ್ ಕೋಡ್ 462) 10.00 ಕೋಟಿ ರೂ.ಗಳನ್ನು (ಹತ್ತು ರೂ.ಗಳು ಮಾತ್ರ) ಲೆಕ್ಕಶೀರ್ಷಿಕೆ 2216–03–102–0–01 (ಯೋಜನೆ) ಅಡಿಯಲ್ಲಿ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮಕ್ಕೆ ಸರ್ಕಾರದ ಉಪ ಕಾರ್ಯದರ್ಶಿ, ವಸತಿ ಇಲಾಖೆ ಇವರ ಮೇಲು ರುಜುವಿನೊಂದಿಗೆ ಪಡೆಯಲು, ಬಿಡುಗಡೆ ಮಾಡಲಾಗಿದೆ.

2) ನೆರೆಹಾವಳಿಯಿಂದ ತೊಂದರೆಗೊಳಗಾದವರಿಗೆ, ಮನೆ ನಿರ್ಮಾಣಕ್ಕಾಗಿ ಹಂಚುವ ನಿವೇಶನಗಳಿಗಾಗಿ ಜಮೀನು ಖರೀದಿಸಲು ಮಾತ್ರ ಈ ಅನುದಾನವನ್ನು ಉಪಯೋಗಿಸಿಕೊಳ್ಳತಕ್ಕದ್ದು.

3) ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ/682/ವೆಚ್ಚ–9/2008 ದಿನಾಂಕ: 20–10–2009ರಲ್ಲಿ ಸಹಮತಿಸಿದ ಮೇರೆಗೆ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2593 **ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ.

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** 2009–10ನೇ ಸಾಲಿಗೆ ಕರ್ನಾಟಕ ರಾಜ್ಯ ಬಾರ್ ಕೌನ್ಸಿಲ್, ಬೆಂಗಳೂರು, ಇವರಿಗೆ ರೂ.9.80 ಲಕ್ಷ ಅನುದಾನ ಮಂಜೂರಾತಿ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ:ಲಾ 210 ಎಲ್‌ಸಿಎಲ್ 2002 ದಿನಾಂಕ 10–07–2003.

2) ಅಸಿಸ್ಟಂಟ್ ರಿಜಿಸ್ಟ್ರಾರ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಹೆಚ್‌ಸಿಬಿ/230/ಬಾರ್ ಕೌನ್ಸಿಲ್ 1983 ದಿನಾಂಕ 22–09–09

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1) ದಿನಾಂಕ 10–07–2003ರ ಅಧಿಸೂಚನೆಯಲ್ಲಿ ಕರ್ನಾಟಕ ರಾಜ್ಯ ವಕೀಲರ ಪರಿಷತ್ತಿಗೆ ರೂ.9.80 ಲಕ್ಷಗಳನ್ನು ನಿಗದಿಗೊಳಿಸಿ ವಕೀಲರುಗಳ ಸಂಘಗಳಿಗೆ ಸಹಾಯಾನುದಾನ ನಿಯಮಗಳನ್ವಯ ನೀಡುವ, ಸಹಾಯಾನುದಾನ ನಿಯಮಾವಳಿಗಳಿಗೆ ತಿದ್ದುಪಡಿ (Amendment) ತರಲಾಗಿದೆ.

ಮೇಲೆ ಓದಲಾದ ಕ್ರಮಾಂಕ (2)ರ ದಿನಾಂಕ: 22–09–09 ಪತ್ರದಲ್ಲಿ ಅಸಿಸ್ಟೆಂಟ್ ರಿಜಿಸ್ಟ್ರಾರ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರು ಕರ್ನಾಟಕ ರಾಜ್ಯ ಬಾರ್ ಕೌನ್ಸಿಲ್‌ಗೆ ಈ ಕೆಳಕಂಡ ಉದ್ದೇಶಗಳಿಗಾಗಿ ಸಹಾಯನುದಾನವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

1. ಕಿರಿಯ ವಕೀಲರುಗಳಿಗೆ ಕಾನೂನು ಕಮ್ಮಟ:ಕಾರ್ಯಾಗಾರ ಹಾಗೂ ವಕೀಲರುಗಳಿಗೆ ತರಬೇತಿ ನೀಡಲು.

2. ಸೆಮಿನಾರ್ ಮತ್ತು ಕಾನೂನು ಶಿಕ್ಷಣ ಕಾರ್ಯಕ್ರಮಗಳಿಗಾಗಿ.

ಸರ್ಕಾರವು ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಅಧಿಸೂಚನೆ ದಿನಾಂಕ: 10–07–2003ರ ತಿದ್ದುಪಡಿಯಲ್ಲಿ ಸದರಿ ಉದ್ದೇಶಕ್ಕಾಗಿ ನಿಗಧಿಪಡಿಸಿರುವಂತೆ ರೂ.9.80ಲಕ್ಷಗಳನ್ನು ಬಿಡುಗಡೆ ಮಾಡಲು ತೀರ್ಮಾನಿಸಲಾಗಿದೆ.

**ಸರ್ಕಾರದ ಆದೇಶ ಸಂ ಲಾ 125 ಎಲ್‌ಸಿಎಲ್ 2009, ಬೆಂಗಳೂರು, ದಿನಾಂಕ: 7ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿ ಕರ್ನಾಟಕ ರಾಜ್ಯ ಬಾರ್ ಕೌನ್ಸಿಲ್‌ಗೆ 2008–09ನೇ ಸಾಲಿಗೆ ರೂ.9.80 ಲಕ್ಷಗಳ (ರೂಪಾಯಿ ಒಂಭತ್ತು ಲಕ್ಷದ ಎಂಭತ್ತು ಸಾವಿರ ಮಾತ್ರ) ಸಹಾಯಾನುದಾನವನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಸದರಿ ಮೊತ್ತವನ್ನು ಮೇಲಿನ ಉದ್ದೇಶಗಳಿಗಾಗಿ ಮಾತ್ರ ವಿನಿಯೋಗಿಸತಕ್ಕದ್ದು.

2009–10ನೇ ಸಾಲಿನಲ್ಲಿ ಬಿಡುಗಡೆ ಮಾಡಲಾಗುವ ಮೊತ್ತಕ್ಕೆ ಬಳಕೆಯ ಪ್ರಮಾಣ ಪತ್ರವನ್ನು (Utilization Certificate) ಅಡ್ವೋಕೇಟ್ ಜನರಲ್ (ಸಕ್ಷಮ ಪ್ರಾಧಿಕಾರದ)ರವರ ಮೇಲು ರುಜುವಿನೊಂದಿಗೆ ಸಲ್ಲಿಸುವ ಷರತ್ತಿಗೊಳಪಟ್ಟಿದೆ.

ಈ ಸಹಾಯಾನುದಾನವನ್ನು ಲೆಕ್ಕ ಶೀರ್ಷಿಕೆ 2014–00–800–4–00 ನ್ಯಾಯಾಲಯದ ನೌಕರರಿಗಾಗಿ ತರಬೇತಿ ಸಂಸ್ಥೆ ಉಪ ಶೀರ್ಷಿಕೆ 059–ಇತರೆ ಖರ್ಚು ಇದರಡಿಯ ಯೋಜನೇತರ ಬಾಬ್ತಿನಲ್ಲಿ ಒದಗಿಸಲಾದ ಹಣದಿಂದ ಭರಿಸತಕ್ಕದ್ದು.

ಇದನ್ನು ಆಂತರಿಕ ಆರ್ಥಿಕ ಸಲಹೆಗಾರರು, ವಸತಿ, ನಗರಾಭಿವೃದ್ಧಿ, ಕಾನೂನು ಮತ್ತು ಇ–ಆಡಳಿತ ಇಲಾಖೆ ರವರ ಟಿಪ್ಪಣಿ ಸಂಖ್ಯೆ:ವನಇ 437 ಆಂಆಬಿ 2009 ದಿನಾಂಕ 03–11–09ರ ಸಹಮತಿ ಹಾಗೂ ಇಲಾಖಾ ಕಾರ್ಯದರ್ಶಿಗಳಿಗೆ ದಿನಾಂಕ 20–01–2003ರ ಆದೇಶ ಸಂಖ್ಯೆ:ಆಇ 01 ಟಿಎಫ್‌ಸಿ 2002ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಶಕುಂತಲ ಹೆಚ್.ಆರ್**

ಪಿ.ಆರ್. 2594

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ರಾಯಚೂರು ನಗರ ಯೋಜನಾ ಸಹಾಯಕ ನಿರ್ದೇಶಕರ ಕಛೇರಿ ಕಟ್ಟಡ ನಿರ್ಮಾಣ ಕಾಮಗಾರಿಯ ಪರಿಷ್ಕೃತ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ:ನಅಇ 25 ಗುಅಪ್ರಾ 2007. ದಿ: 4–5–2007.

2) ನಿರ್ದೇಶಕರು, ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ:ನಯೋ/ಲೆವಿ2/12/2009–10 ದಿ:22–6–2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರ ಸರ್ಕಾರಿ ಆದೇಶದಲ್ಲಿ ರಾಯಚೂರು ನಗರ ಯೋಜನಾ ಸಹಾಯಕ ನಿರ್ದೇಶಕರ ಕಛೇರಿ ಕಟ್ಟಡ ನಿರ್ಮಾಣ ಕಾಮಗಾರಿಯ ರೂ.50.00 ಲಕ್ಷಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ.

ನಿರ್ದೇಶಕರು, ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆ ಬೆಂಗಳೂರು ರವರು ಮೇಲೆ ಓದಲಾದ ಕ್ರಮಾಂಕ (2)ರ ಪತ್ರದಲ್ಲಿ ಸದರಿ ಕಟ್ಟಡದ ಕಾಮಗಾರಿಯು ಅಂತಿಮ ಹಂತ ತಲುಪಿದ್ದು, ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ಉತ್ತರ) ಧಾರವಾಡ ಇವರು ಕಾಮಗಾರಿಯನ್ನು ಗುತ್ತಿಗೆ ಆಧಾರದ ಮೇರೆಗೆ ರೂ.62,75,503,17 ಗಳಿಗೆ ಟೆಂಡರ್ ಪ್ರಿಮೀಯಂ ಶೇ.7.75 ಅಧಿಕದಂತೆ ಗುತ್ತಿಗೆದಾರರಿಗೆ ವಹಿಸಿ ಕೊಟ್ಟು ನಿರ್ವಹಿಸಲಾಗಿದೆ. ಸದರಿ ಕಾಮಗಾರಿಯು ಅಂತಿಮ ಹಂತದಲ್ಲಿ ಇರುತ್ತದೆ. ಕಾಮಗಾರಿಗಳನ್ನು ನಿರ್ವಹಿಸುವಾಗ ಅಂದಾಜು ಪಟ್ಟಿಯಂತೆ ಕಟ್ಟಡಕ್ಕೆ ಅಲುಮಿನಿಯಂ ಕಿಟಕಿಗಳ ಬದಲಾಗಿ ಸ್ಟೀಲ್ ಕಿಟಕಿಗಳನ್ನು ಸುರಕ್ಷಿತೆ ದೃಷ್ಠಿಯಿಂದ ಅಳವಡಿಸಲಾಗಿದ್ದು, ಸೆಪ್ಟಿಕ್ ಟ್ಯಾಂಕ್, ಕಾಂಪೌಂಡ್ ವಾಲ್, ಜೀಪ್ ಶೆಡ್, ದ್ವಜರೋಹಣ ಸ್ಥಂಭ. ಬೋರ್ ವೆಲ್, ವಿದ್ಯುತ್ತೀಕರಣ ಇತ್ಯಾಧಿ ಕಾಮಗಾರಿಗಳನ್ನು ಹೆಚ್ಚುವರಿಯಾಗಿ ವರ್ಕ್‌ಸ್ಲಿಪ್, ಇ.ಐ.ಆರ್.ಎಲ್., ಮೂಲಕ ಕೈಗೆತ್ತಿಕೊಂಡು ಪೂರ್ಣಗೊಳಿಸಲು ಉದ್ದೇಶಿಸಿ, ಒಟ್ಟಾರೆ ರೂ.65,25,164.00ಗಳಿಗೆ ಪರಿಷ್ಕೃತ ಅಂದಾಜು ಸಲ್ಲಿಸಿ, ಆಡಳಿತಾತ್ಮಕ ಅನುಮೋದನೆ ನೀಡುವಂತೆ ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 107 ಗುಅಪ್ರಾ 2009, ಬೆಂಗಳೂರು, ದಿನಾಂಕ: 11ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಯಚೂರು ನಗರ ಯೋಜನಾ ಸಹಾಯಕ ನಿರ್ದೇಶಕರ ಕಛೇರಿ ಕಟ್ಟಡ ನಿರ್ಮಾಣ ಕಾಮಗಾರಿಯ ಪರಿಷ್ಕೃತ ಅಂದಾಜು ರೂ.65,25,164.00 ಗಳ ವೆಚ್ಚದಲ್ಲಿ ಸದರೀ ಕಾಮಗಾರಿಗಳನ್ನು ಪೂರ್ಣಗೊಳಿಸಲು ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

ಸದರಿ ಕಾಮಗಾರಿಯನ್ನು ಕೈಕೊಳ್ಳಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮ 2000ನ್ನು ಪಾಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2595 **ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ ನಗರಾಭಿವೃದ್ಧಿ ಇಲಾಖೆ.

**ತಿದ್ದುಪಡಿ**

**ಸಂಖ್ಯೆ:ನಅಇ 186 ಮೈಅಪ್ರಾ 2009, ಬೆಂಗಳೂರು, ದಿನಾಂಕ: 3ನೇ ಅಕ್ಟೋಬರ್ 2009**

ಮಂಗಳೂರು ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾ ಯೋಜನೆ 2021 (ಪರಿಷ್ಕೃತ–II) ಕ್ಕೆ ಸರ್ಕಾರವು ಅಂತಿಮ ಅನುಮೋದನೆ ನೀಡಿ ಹೊರಡಿಸಿರುವ ಸರ್ಕಾರಿ ಆದೇಶ ಸಂಖ್ಯೆ:ನಅಇ 186 ಮೈಅಪ್ರಾ 2009, ದಿನಾಂಕ: 10–09–2009 ರಲ್ಲಿ ಈ ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.

1) ಉಲ್ಲೇಖ (3)ರಲ್ಲಿ **"ಪರಿಷ್ಕೃತ – ಖಖ"** ಎಂದಿರುವುದಕ್ಕೆ ಬದಲಾಗಿ **"ಪರಿಷ್ಕೃತ–II"** ಎಂದು
2) ಕಂಡಿಕೆ 3ರಲ್ಲಿನ 8ನೇ ಸಾಲಿನಲ್ಲಿ **"ಇಂದಿನ"** ಎಂದು ನಮೂದಿಸಿರುವುದಕ್ಕೆ ಬದಲಾಗಿ **"ಮುಂದಿನ"** ಎಂದು
3) ಆದೇಶ ಸಂಖ್ಯೆ: ನಂ **"ಅಇ ಮತ್ತು ಬೆಂಗಳ್ರರ"** ಎಂದು ನಮೂದಿಸಿರುವುದಕ್ಕೆ ಬದಲಾಗಿ ಕ್ರಮವಾಗಿ **"ನಅಇ ಮತ್ತು ಬೆಂಗಳೂರು"** ಎಂದು
4) ನಿಬಂಧನೆ ಸಂಖ್ಯೆ: 2 ರಲ್ಲಿ **"High rise ಕಟ್ಟಡಗಳು"** ಎಂದು ನಮೂದಿಸಿರುವುದಕ್ಕೆ ಬದಲಾಗಿ **"ವಸತಿ High rise ಕಟ್ಟಡಗಳು"** ಎಂದು
5) ನಿಬಂಧನೆ ಸಂಖ್ಯೆ: 3 ರಲ್ಲಿ ಮೊದಲಿಗೆ **"Development Plan ಮತ್ತು Integerated townshipಗಳನ್ನು ಹೊರತುಪಡಿಸಿ"** ಎಂಬ ಪದಗಳನ್ನು ಸೇರಿಸಿ ಮುಂದಿನ ಪದಗಳನ್ನು ಓದಿಕೊಳ್ಳತಕ್ಕದ್ದು.
6) ನಿಬಂಧನೆ 5 ರಲ್ಲಿ **"2.50 x 5.0 ಮೀ"** ಎಂದು ನಮೂದಿಸಿರುವುದಕ್ಕೆ ಬದಲಾಗಿ **"2.50 ಮೀ x 5.0ಮೀ"** ಎಂದು

**ಹಾಗೂ**

7) ಮಂಗಳೂರು ಮಹಾಯೋಜನೆ (ಪರಿಷ್ಕೃತ–II) ಯ ವಲಯ ನಿಯಮಾವಳಿಗಳಲ್ಲಿನ ಅಂಶ 28.4.1 ರಲ್ಲಿ ಅಕ್ರಮ ನಿವೇಶನಗಳನ್ನು ಸಕ್ರಮಗೊಳಿಸಲು ಪ್ರಸ್ತಾಪಿಸಿರುವುದು ಮೂಲ ಕಾಯ್ದೆಗೆ ವಿರುದ್ಧವಾಗಿರುತ್ತದೆ. ಈ ಬಗ್ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961 ಹಾಗೂ ಇತರೆ ಕಾಯ್ದೆಗಳಿಗೆ ತಿದ್ದುಪಡಿ ತರುವ ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿರುತ್ತದೆ. ಆದ್ದರಿಂದ ಅಂಶ 28.4.1 ನ್ನು ತಕ್ಷಣದಿಂದಲೇ ಜಾರಿಗೆ ಬರುವಂತೆ ರದ್ದುಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2596 **ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ ನಗರಾಭಿವೃದ್ಧಿ ಇಲಾಖೆ.

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ:** ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರವಿದ್ಯಾ ಮಂಡಳಿಯ ಶ್ರೇಷ್ಠ ವಿಜ್ಞಾನಿಗಳಿಗೆ ಮತ್ತು ಇಂಜಿನಿಯರುಗಳಿಗೆ ರಾಜ್ಯ ಪ್ರಶಸ್ತಿ ಆಯ್ಕೆ ಸಮಿತಿಯ ಪುನರ್‌ರಚನೆ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ ವಿಯಇ 11 ವಿತ್ರಮ 1994, ದಿನಾಂಕ: 01–09–1994
2) ಸರ್ಕಾರದ ಆದೇಶ ಸಂಖ್ಯೆ ವಿಯಇ 114 ವಿತ್ರಮ 2007, ದಿನಾಂಕ: 01–08–2007
3) ಸರ್ಕಾರದ ಆದೇಶ ಸಂಖ್ಯೆ ವಿಯಇ 09 ವಿತ್ರಮ 2009, ದಿನಾಂಕ: 20–02–2009
4) ಕಾರ್ಯದರ್ಶಿ ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರವಿದ್ಯಾ ಮಂಡಳಿ ಇವರ ಪತ್ರ ಸಂ:6.1.11.YS/770, ದಿನಾಂಕ: 15–01–2009 ಮತ್ತು 30–10–2009.

**ಪ್ರಸ್ತಾವನೆ:**

ಸರ್.ಸಿ.ವಿ.ರಾಮನ್‌ರವರು "ರಾಮನ್ ಪರಿಣಾಮ" ಎಂಬ ತಮ್ಮ ವೈಜ್ಞಾನಿಕ ಅವಿಷ್ಕಾರವನ್ನು ಜಗತ್ತಿಗೆ ದಿನಾಂಕ: 28–02–1928ನೇ ಇಸವಿಯಲ್ಲಿ ನೀಡಿದರು. ಇದಕ್ಕಾಗಿ ಅವರಿಗೆ ನೋಬೇಲ್ ಪ್ರಶಸ್ತಿ ದೊರೆಯಿತು. ಈ ಅವಿಸ್ಮರಣೀಯ

3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ(ದಕ್ಷಿಣ)ವಲಯ, ಬೆಂಗಳೂರು ರವರ ದಿನಾಂಕ 21.10.2009ರ ಪತ್ರ ಸಂಖ್ಯೆ: ಮುಸದ/ ಆಪ್ತಶಾಖೆ/ ಟೆಂಡರ್/ 08–09/3055

**ಪ್ರಸ್ತಾವನೆ:**

ಬೆಳಗಾವಿ ಜಿಲ್ಲೆ ಹಾಗೂ ತಾಲ್ಲೂಕು, ಅತ್ತವಾಡ ಸಣ್ಣ ನೀರಾವರಿ ಕೆರೆ ನಿರ್ಮಾಣ ಕಾಮಗಾರಿಯ 171.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 05.02.2009ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೆಳಗಾವಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ ದಿನಾಂಕ | 15.06.2009 |
| ಬೆಳಗಾವಿ ಜಿಲ್ಲಾ ಟೆಂಡರ್ ಬುಲೆಟಿನ್ ದಿನಾಂಕ | 08.06.2009. |
| ಕರ್ನಾಟಕ ರಾಜ್ಯ ಪತ್ರ ದಿನಾಂಕ | 25.06.2009. |
| ಪ್ರಜಾವಾಣಿ ದಿನ ಪತ್ರಿಕೆ ದಿನಾಂಕ | 13.06.2009. |

ಈ ಟೆಂಡರ್ ಕರೆಗೆ ಪ್ರತಿಕ್ರಿಯಿಸಿ 07 ಜನ ಗುತ್ತಿಗೆದಾರರು ಖಾಲಿ ಟೆಂಡರ್ ಫಾರಂ ಪಡೆದು ಇಬ್ಬರು ಗುತ್ತಿಗೆದಾರರು ಮಾತ್ರ ನಿಗದಿತ ದಿನದಂದು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಇವರ ತಾಂತ್ರಿಕ ಬಿಡ್ ಅನ್ನು ದಿನಾಂಕ 05.08.2009ರಂದು ತೆರೆದು ಪರೀಶೀಲಿಸಲಾಗಿದ್ದು ಈ ಪೈಕಿ ಅರ್ಹತೆ ಹೊಂದಿದ ಒಬ್ಬರು ಗುತ್ತಿಗೆದಾರರ ಆರ್ಥಿಕ ಬಿಡ್ ಅನ್ನು ದಿನಾಂಕ 17.08.2009 ರಂದು ತೆರೆಯಲಾಗಿದೆ. ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| | | | | |
|---|---|---|---|---|
| **ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ** | | | | ರೂ 1,36,09,659/– |
| **ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ** | | | | ರೂ 1,36,20,070/– |
| **ಕ್ರ.ಸಂ** | **ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br><br>ಶ್ರೀ/ಮೆಸರ್ಸ್** | **ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ** | **ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ** | **ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ** |
| 1 | ಎಸ್.ಆರ್.ಕಪ್ಪಲಗುದ್ದಿ<br>1ನೇ ದರ್ಜೆ ಗುತ್ತಿಗೆದಾರರು | 1,63,99,619/– | 20.50<br>ಹೆಚ್ಚು | 20.41<br>ಹೆಚ್ಚು |

ಮೇಲ್ಕಂಡ ಪಟ್ಟಿಯಂತೆ ಶ್ರೀ ಎಸ್.ಆರ್.ಕಪ್ಪಲಗುದ್ದಿ, ಒಂದನೇ ದರ್ಜೆ ಗುತ್ತಿಗೆದಾರರು ಇವರ ಟೆಂಡರ್ ಏಕೈಕ ಟೆಂಡರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 20.41ರಷ್ಟು ಹೆಚ್ಚಾಗಿರುತ್ತದೆ. ಮುಖ್ಯ ಇಂಜಿನಿಯರ್ ರವರು ಶ್ರೀ ಎಸ್.ಆರ್.ಕಪ್ಪಲಗುದ್ದಿ, ಒಂದನೇ ದರ್ಜೆ ಗುತ್ತಿಗೆದಾರರು ಇವರ ಜೊತೆ ಸಂದಾನವನ್ನು ಮಾಡಿದ್ದು, ಸದರಿ ಗುತ್ತಿಗೆದಾರರು ಟೆಂಡರ್ ದರಗಳನ್ನು ಪರಿಷ್ಕೃತ ಟೆಂಡರ್ ಮೊತ್ತದ ಮೇಲೆ ಶೇಕಡ 18 ರಷ್ಟು ಹೆಚ್ಚಿನ ಮೊತ್ತಕ್ಕೆ ಅಂದರೆ ರೂ.1,60,71,683/–ಗಳಿಗೆ ಕಾಮಗಾರಿಯನ್ನು ನಿರ್ವಹಿಸಲು ಸಮ್ಮತಿಸಿರುವುದಾಗಿ ತಿಳಿಸಿ ಅವರ ಟೆಂಡರನ್ನು ಅನುಮೋದಿಸಲು ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 20/10/09ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 1,36,20,070/–ಗಳ ಮೇಲೆ ಶೇಕಡ 12 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.1,52,54,478/–ಗಳಿಗೆ ಕಾಮಗಾರಿಯನ್ನು ಶ್ರೀ ಎಸ್.ಆರ್.ಕಪ್ಪಲಗುದ್ದಿ, 1ನೇ ದರ್ಜೆ ಗುತ್ತಿಗೆದಾರರು, ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 22 ಹೊಕೆನಿ 2009, ಬೆಂಗಳೂರು, ದಿನಾಂಕ :29ನೇ ಅಕ್ಟೋಬರ್ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆ ಹಾಗೂ ತಾಲ್ಲೂಕು, ಅತ್ತವಾಡ ಸಣ್ಣ ನೀರಾವರಿ ಕೆರೆ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ ರೂ. 1,36,20,070/–ಗಳ ಮೇಲೆ ಶೇಕಡ 12ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.1,52,54,478/–ಗಳಿಗೆ (ಒಂದು ಕೋಟಿ ಐವತ್ತೆರಡು ಲಕ್ಷದ ಐವತ್ತ ನಾಲ್ಕು ಸಾವಿರದ ನಾಲ್ಕುನೂರ ಎಪ್ಪತ್ತೆಂಟು ರೂ.ಗಳು ಮಾತ್ರ) ಶ್ರೀ ಎಸ್.ಆರ್.ಕಪ್ಪಲಗುದ್ದಿ, ಒಂದನೇ ದರ್ಜೆ ಗುತ್ತಿಗೆದಾರರು, ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಪಿ.ಆರ್. 2626

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ :** ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕು, ಗಾಮ ಗ್ರಾಮದ ಬಳಿ ಕುಮುದ್ವತಿ ನದಿಗೆ ಅಡ್ಡಲಾಗಿ ಸೇತುವೆ ಸಹಿತ ಬ್ಯಾರೆಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ:ಸನೀಇ 02 ನಯೋಕಾ 2009 ದಿನಾಂಕ: 05.02.2009
2. ದಿನಾಂಕ 10.08.2009ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ:ಮುಸದ/ತಾಂ.3/ಸಇಂ.8/ಶಿವಮೊಗ್ಗ/ಟೆಂಡರ್/2009–10/3188.
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ(ದಕ್ಷಿಣ)ವಲಯ, ಬೆಂಗಳೂರು ರವರ ದಿನಾಂಕ 21.10.2009ರ ಪತ್ರ ಸಂಖ್ಯೆ: ಮುಸದ/ ಆಪ್ತಶಾಖೆ/ ಟೆಂಡರ್/ 08–09/3055

**ಪ್ರಸ್ತಾವನೆ:**

ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕು, ಗಾಮ ಗ್ರಾಮದ ಬಳಿ ಕುಮುದ್ವತಿ ನದಿಗೆ ಅಡ್ಡಲಾಗಿ ಸೇತುವೆ ಸಹಿತ ಬ್ಯಾರೆಜ್ ನಿರ್ಮಾಣ ಕಾಮಗಾರಿಯ 145.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 05/02/2009ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಶಿವಮೊಗ್ಗ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ರಾಜ್ಯ ಟೆಂಡರ್ ಬುಲೆಟಿನ್ | 07.02.2009 |
| 2 | ಶಿವಮೊಗ್ಗ ಜಿಲ್ಲಾ ಟೆಂಡರ್ ಬುಲೆಟಿನ್ | 31.01.2009 |
| 3 | ಕನ್ನಡಪ್ರಭ ದಿನ ಪತ್ರಿಕೆ | 08.02.2009 |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಒಬ್ಬ ಗುತ್ತಿಗೆದಾರರು ಮಾತ್ರ ಖಾಲಿ ಟೆಂಡರ್ ಫಾರಂ ಪಡೆದು ನಿಗದಿತ ದಿನದಂದು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ತಾಂತ್ರಿಕ ಬಿಡ್ ಅನ್ನು ದಿನಾಂಕ 16/03/09ರಂದು ತೆರೆಯಲಾಗಿ ಈ ಗುತ್ತಿಗೆದಾರರ ಟೆಂಡರು ಅರ್ಹವಾಗಿದ್ದು, ಅವರ ಆರ್ಥಿಕ ಬಿಡ್‌ಗಳನ್ನು 27/05/2009 ತೆರೆಯಲಾಗಿದೆ. ಆರ್ಥಿಕ ಬಿಡ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ 1,35,22,943/– |
|---|---|---|---|---|
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | | | | ರೂ 1,28,57,010/– |
| ಕ್ರ.ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br>ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ ರೂ. | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
| 1 | ಎಸ್.ಸಿ.ಬಿರಾದರ್ , 1ನೇ ದರ್ಜೆ ಗುತ್ತಿಗೆದಾರರು | 1,63,11,619/– | 20.62 ಹೆಚ್ಚು | 26.87 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ:1ರಲ್ಲಿರುವ ಶ್ರೀ ಎಸ್.ಸಿ.ಬಿರಾದರ್, 1ನೇ ದರ್ಜೆ ಗುತ್ತಿಗೆದಾರರು ಏಕೈಕ ಟೆಂಡರದಾರರಾಗಿದ್ದು ಇವರು ನಮೂದಿಸಿರುವ ಮೊತ್ತ ರೂ. **1,63,11,619/–**ಗಳಾಗಿದ್ದು ಇವರು ಟೆಂಡರಿನಲ್ಲಿ ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ **26.87**ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 20/10/09ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. **1,28,57,010/–**ಗಳ ಮೇಲೆ ಶೇಕಡ **13.00**ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. **1,45,28,421/–** ಗಳಿಗೆ ಕಾಮಗಾರಿಯನ್ನು ಶ್ರೀ ಎಸ್.ಸಿ.ಬಿರಾದರ್, 1ನೇ ದರ್ಜೆ ಗುತ್ತಿಗೆದಾರರು ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 61 ಅಪಿಬಂ 2009, ಬೆಂಗಳೂರು, ದಿನಾಂಕ:29ನೇ ಅಕ್ಟೋಬರ್ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕು, ಗಾಮ ಗ್ರಾಮದ ಬಳಿ ಕುಮುದ್ವತಿ ನದಿಗೆ ಅಡ್ಡಲಾಗಿ ಸೇತುವೆ ಸಹಿತ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. **1,28,57,010/–**ಗಳ ಮೇಲೆ ಶೇಕಡ **13.00**ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. **1,45,28,421/–** ಗಳಿಗೆ (ಒಂದು ಕೋಟಿ ನಲವತ್ತೈದು ಲಕ್ಷದ ಇಪ್ಪತ್ತೆಂಟು ಸಾವಿರದ ನಾಲ್ಕುನೂರ ಇಪ್ಪತ್ತೊಂದು ರೂ.ಗಳು ಮಾತ್ರ) ಶ್ರೀ ಎಸ್.ಸಿ.ಬಿರಾದರ್, 1ನೇ ದರ್ಜೆ ಗುತ್ತಿಗೆದಾರರು, ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಪಿ.ಆರ್. 2631

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ :** ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕು ಮಡಬ ಸಿದ್ದಾಪುರ ಹುಣಸೇಕಟ್ಟೆ ಹಾಗೂ ಬಿಸಲಹಳ್ಳಿ ಗ್ರಾಮದ ಬಳಿ ಹೊಸಕೆರೆ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ:ಸನೀಇ 14 ಮಸಾವಿ 2009(1), ದಿನಾಂಕ: 04.02.2009.
2. ದಿನಾಂಕ 10.08.2009ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆಮುಸದ/ತಾಂ.3/ಸಇಂ.8/ಶಿವಮೊಗ್ಗ/ 2009–10/3187
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ(ದಕ್ಷಿಣ)ವಲಯ, ಬೆಂಗಳೂರು ರವರ ದಿನಾಂಕ 21.10.2009ರ ಪತ್ರ ಸಂಖ್ಯೆ: ಮುಸದ/ ಆಪ್ತಶಾಖೆ/ ಟೆಂಡರ್/ 08–09/3055.

**ಪ್ರಸ್ತಾವನೆ:**

ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕು ಮಡಬ ಸಿದ್ದಾಪುರ ಹುಣಸೇಕಟ್ಟೆ ಗ್ರಾಮದ ಬಳಿ ಹೊಸಕೆರೆ ನಿರ್ಮಾಣ ಕಾಮಗಾರಿಯ 100.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಹಾಗೂ ಬಿಸಲಹಳ್ಳಿ ಗ್ರಾಮದ ಬಳಿ ಹೊಸಕೆರೆ ನಿರ್ಮಾಣ ಕಾಮಗಾರಿಯ 125.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 05/02/2009ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಎರಡು ಕಾಮಗಾರಿಗಳನ್ನು ಕೈಗೊಳ್ಳಲು ಶಿವಮೊಗ್ಗ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ರಾಜ್ಯ ಟೆಂಡರ್ ಬುಲೆಟಿನ್ | 07.02.2009 |
| 2 | ಶಿವಮೊಗ್ಗ ಜಿಲ್ಲಾ ಟೆಂಡರ್ ಬುಲೆಟಿನ್ | 31.01.2009 |
| 3 | ವಿಜಯ ಕರ್ನಾಟಕ ದಿನ ಪತ್ರಿಕೆ | 06.02.2009 |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಇಬ್ಬರು ಜನ ಗುತ್ತಿಗೆದಾರರು ಮಾತ್ರ ಖಾಲಿ ಟೆಂಡರ್ ಫಾರಂ ಪಡೆದು ನಿಗದಿತ ದಿನದಂದು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ತಾಂತ್ರಿಕ ಬಿಡ್ ಅನ್ನು ದಿನಾಂಕ 09/07/2009ರಂದು ತೆರೆಯಲಾಗಿ ಈ ಪೈಕಿ ಒಬ್ಬ ಗುತ್ತಿಗೆದಾರರ ಟೆಂಡರು ಮಾತ್ರ ಅರ್ಹವಾಗಿದ್ದು, ಅವರ ಆರ್ಥಿಕ ಬಿಡ್‌ಗಳನ್ನು 13/07/2009 ತೆರೆಯಲಾಗಿದೆ. ಆರ್ಥಿಕ ಬಿಡ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| **ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ** | | | | **ರೂ 1,85,16,303/–** |
|---|---|---|---|---|
| **ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ** | | | | **ರೂ 1,83,30,275/–** |
| **ಕ್ರ.ಸಂ** | **ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್** | **ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ ರೂ.** | **ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ** | **ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ** |
| 1 | **ಎಸ್.ಸಿ.ಬಿರಾದರ್ , 1ನೇ ದರ್ಜೆ ಗುತ್ತಿಗೆದಾರರು** | **2,14,26,348/–** | **15.72 ಹೆಚ್ಚು** | **16.89 ಹೆಚ್ಚು** |

ಮೇಲ್ಕಂಡಂತೆ ಕ್ರ.ಸಂ:1ರಲ್ಲಿರುವ ಶ್ರೀ ಎಸ್.ಸಿ.ಬಿರಾದರ್, 1ನೇ ದರ್ಜೆ ಗುತ್ತಿಗೆದಾರರು ಏಕೈಕ ಟೆಂಡರದಾರರಾಗಿದ್ದು ಇವರು ನಮೂದಿಸಿರುವ ಮೊತ್ತ ರೂ. **2,14,26,348/–**ಗಳಾಗಿದ್ದು ಇವರು ಟೆಂಡರಿನಲ್ಲಿ ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ **16.89**ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 20/10/09ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. **1,83,30,275/–**ಗಳ ಮೇಲೆ ಶೇಕಡ **11.00**ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. **2,03,46,605/–** ಗಳಿಗೆ ಕಾಮಗಾರಿಯನ್ನು ಶ್ರೀ ಎಸ್.ಸಿ.ಬಿರಾದರ್, 1ನೇ ದರ್ಜೆ ಗುತ್ತಿಗೆದಾರರು ಇವರಿಗೆ ವಹಿಸಲು

ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 13 ಹೊಕೆನಿ 2009, ಬೆಂಗಳೂರು, ದಿನಾಂಕ:29ನೇ ಅಕ್ಟೋಬರ್ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕು ಮಡಬ ಸಿದ್ದಾಪುರ ಹುಣಸೇಕಟ್ಟೆ ಹಾಗೂ ಬಿಸಲಹಳ್ಳಿ ಗ್ರಾಮದ ಬಳಿ ಹೊಸಕೆರೆ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. **1,83,30,275/–**ಗಳ ಮೇಲೆ ಶೇಕಡ 11.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. **2,03,46,605/–** ಗಳಿಗೆ (ಎರಡು ಕೋಟಿ ಮೂರು ಲಕ್ಷದ ನಲವತ್ತಾರು ಸಾವಿರದ ಆರುನೂರ ಐದು ರೂ.ಗಳು ಮಾತ್ರ) ಶ್ರೀ ಎಸ್.ಸಿ.ಬಿರಾದರ್, 1ನೇ ದರ್ಜೆ ಗುತ್ತಿಗೆದಾರರು, ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಪಿ.ಆರ್. 2632 ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ :** ದಾವಣಗೆರೆ ಜಿಲ್ಲೆ, ಚನ್ನಗಿರಿ ತಾಲ್ಲೂಕು, ತಾವರಕೆರೆ ಮುಳ್ಳಕೆರೆ ಅಭಿವೃದ್ಧಿ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ :ಸನೀಇ 14(2) ಮಸಾವಿ 2009 ದಿನಾಂಕ:16.02.2009
2. ದಿನಾಂಕ 21.08.2009ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ:ಮುಸದ/ತಾಂ.4/ಸಇಂ.10/ದಾವಣಗೆರೆ /ಚನ್ನಗಿರಿ/ತಾವರಕೆರೆ ಮುಳ್ಳಕೆರೆ ಅಭಿವೃದ್ಧಿ /2009/3346.
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ(ದಕ್ಷಿಣ)ವಲಯ, ಬೆಂಗಳೂರು ರವರ ದಿನಾಂಕ 21.10.2009ರ ಪತ್ರ ಸಂಖ್ಯೆ: ಮುಸದ/ ಆಪ್ತಶಾಖೆ/ ಟೆಂಡರ್/ 08–09/3055.

**ಪ್ರಸ್ತಾವನೆ:**

ದಾವಣಗೆರೆ ಜಿಲ್ಲೆ, ಚನ್ನಗಿರಿ ತಾಲ್ಲೂಕು, ತಾವರಕೆರೆ ಮುಳ್ಳಕೆರೆ ಅಭಿವೃದ್ಧಿ ಕಾಮಗಾರಿಯ 36.50 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 04/02/2009ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಚಿತ್ರದುರ್ಗ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| **1** | ದಾವಣಗೆರೆ ಜಿಲ್ಲಾ ಟೆಂಡರ್ ಬುಲೆಟಿನ್ | 07.02.2009 |
| **2** | ಕನ್ನಡಪ್ರಭ ದಿನ ಪತ್ರಿಕೆ | 11.02.2009 |
| **3** | ವಿಜಯ ಕರ್ನಾಟಕ ದಿನ ಪತ್ರಿಕೆ | 11.02.2009 |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ 07 ಜನ ಗುತ್ತಿಗೆದಾರರ ಪೈಕಿ ನಿಗದಿತ ದಿನದಂದು ಇಬ್ಬರು ಗುತ್ತಿಗೆದಾರರು ಮಾತ್ರ ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ಟೆಂಡರುಗಳನ್ನು ದಿನಾಂಕ 18/06/09ರಂದು ತೆರೆಯಲಾಗಿದೆ. ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| | | | | |
|---|---|---|---|---|
| **ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ** | | | | **ರೂ 35,90,515/-** |
| **ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ** | | | | **ರೂ 35,85,468/-** |
| **ಕ್ರ.ಸಂ** | **ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್** | **ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ ರೂ.** | **ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ** | **ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ** |
| **1** | **ಜಿ.ಎ.ಪಾಟೀಲ್ , 1ನೇ ದರ್ಜೆ ಗುತ್ತಿಗೆದಾರರು** | **41,74,692/-** | **16.27 ಹೆಚ್ಚು** | **16.43 ಹೆಚ್ಚು** |
| **2** | **ಎಮ್.ಜಿ.ಮಂಜುನಾಥ್ , 1ನೇ ದರ್ಜೆ ಗುತ್ತಿಗೆದಾರರು** | **46,50,795/-** | **29.53 ಹೆಚ್ಚು** | **29.71 ಹೆಚ್ಚು** |

ಮೇಲ್ಕಂಡಂತೆ ಕ್ರ.ಸಂ:1ರಲ್ಲಿರುವ ಶ್ರೀ ಜಿ.ಎ.ಪಾಟೀಲ್ 1ನೇ ದರ್ಜೆ ಗುತ್ತಿಗೆದಾರರು ಅತಿ ಕಡಿಮೆ ದರ ನೀಡಿರುವ ಟೆಂಡರದಾರರಾಗಿದ್ದು ಇವರು ನಮೂದಿಸಿರುವ ಮೊತ್ತ ರೂ. **41,74,692/-**ಗಳಾಗಿದ್ದು ಇವರು ಟೆಂಡರಿನಲ್ಲಿ ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ **16.43**ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 20/10/09ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. **35,85,468/-**ಗಳ ಮೇಲೆ ಶೇಕಡ **10.00**ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. **39,44,015/-** ಗಳಿಗೆ ಕಾಮಗಾರಿಯನ್ನು ಶ್ರೀ ಜಿ.ಎ.ಪಾಟೀಲ್ 1ನೇ ದರ್ಜೆ ಗುತ್ತಿಗೆದಾರರು, ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 65 ಅಪಿಬಂ 2009, ಬೆಂಗಳೂರು, ದಿನಾಂಕ:29ನೇ ಅಕ್ಟೋಬರ್ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಾವಣಗೆರೆ ಜಿಲ್ಲೆ, ಚನ್ನಗಿರಿ ತಾಲ್ಲೂಕು, ತಾವರಕೆರೆ ಮುಳ್ಳಕೆರೆ ಅಭಿವೃದ್ಧಿ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. **35,85,468/-**ಗಳ ಮೇಲೆ ಶೇಕಡ **10.00**ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. **39,44,015/-** ಗಳಿಗೆ (ಮೂವತ್ತೊಂಬತ್ತು ಲಕ್ಷದ ನಲವತ್ತನಾಲ್ಕು ಸಾವಿರದ ಹದಿನೈದು ರೂ.ಗಳು ಮಾತ್ರ) ಶ್ರೀ ಜಿ.ಎ.ಪಾಟೀಲ್, 1ನೇ ದರ್ಜೆ ಗುತ್ತಿಗೆದಾರರು, ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಪಿ.ಆರ್. 2623

ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಸಾರ್ವಜನಿಕ ಉದ್ದಿಮೆಗಳ ಇಲಾಖೆಯ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 48 ಸಸಿವಿ 02, ದಿನಾಂಕ:7.3.2003.
2. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 48 ಸಸಿವಿ 02, ದಿನಾಂಕ:3.6.2003.
3. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 17 ಸಸಿವಿ 04, ದಿನಾಂಕ:6.1.2005.
4. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 14 ಸಸಿವಿ 05, ದಿನಾಂಕ:14.7.2005.
5. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 10 ಸಸಿವಿ 06, ದಿನಾಂಕ:25.2.2005.
6. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 50 ಸಸಿವಿ 06, ದಿನಾಂಕ:27.6.2006.
7. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 17 ಸಸಿವಿ 07, ದಿನಾಂಕ:20.3.2007.
8. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 626 ಸಅಸೇ 07, ದಿನಾಂಕ:1.3.2008.
9. ಸಾರ್ವಜನಿಕ ಉದ್ದಿಮೆಗಳ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಸಾಉಇ 15 ಎಂಇಎ 2007, ದಿನಾಂಕ:20.10.2009

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (8)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ಸಾರ್ವಜನಿಕ ಉದ್ದಿಮೆಗಳ ಇಲಾಖೆಯಲ್ಲಿ 51 ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ:7.3.2008 ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (9)ರ ಅನಧಿಕೃತ ಟಿಪ್ಪಣಿಯಲ್ಲಿ ಸಾರ್ವಜನಿಕ ಉದ್ದಿಮೆಗಳ ಇಲಾಖೆಯಲ್ಲಿನ 51 ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ:6.3.2009 ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸುವಂತೆ ಕೋರಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 534 ಸಅಸೇ 2009, ಬೆಂಗಳೂರು, ದಿನಾಂಕ: 3ನೇ ನವೆಂಬರ್, 2009**

ಕರ್ನಾಟಕ ಸರ್ಕಾರದ ಸಚಿವಾಲಯದ ಸಾರ್ವಜನಿಕ ಉದ್ದಿಮೆಗಳ ಇಲಾಖೆಯಲ್ಲಿನ ಈ ಕೆಳಕಂಡ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ:7.3.2009 ರಿಂದ ಒಂದುವರ್ಷದ ಅವಧಿಗೆ ಮುಂದುವರಿಸಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಜಂಟಿ ಕಾರ್ಯದರ್ಶಿ | 01 ಹುದ್ದೆ |
| 2 | ಆರ್ಥಿಕ ಸಲಹೆಗಾರರು | 01 ಹುದ್ದೆ |
| 3 | ಉಪ ಕಾರ್ಯದರ್ಶಿ | 01 ಹುದ್ದೆ |
| 4 | ಅಧೀನ ಕಾರ್ಯದರ್ಶಿ | 02 ಹುದ್ದೆಗಳು |
| 5 | ಶಾಖಾಧಿಕಾರಿ | 03 ಹುದ್ದೆಗಳು |
| 6 | ಪತ್ರಾಂಕಿತ ಆಪ್ತ ಸಹಾಯಕರು | 01 ಹುದ್ದೆ |
| 7 | ಭಾಷಾಂತರಕಾರರು (ಶಾಖಾಧಿಕಾರಿ) | 01 ಹುದ್ದೆ |
| 8 | ಹಿರಿಯ ಸಹಾಯಕರು | 02 ಹುದ್ದೆಗಳು |
| 9 | ಸಹಾಯಕ ಸಾಂಖ್ಯಿಕ ಅಧಿಕಾರಿ | 01 ಹುದ್ದೆ |
| 10 | ಶೀಘ್ರಲಿಪಿಗಾರರು (ಗಣಕ ಯಂತ್ರ ಜ್ಞಾನವನ್ನು ಹೊಂದಿರುವವರು) | 12 ಹುದ್ದೆಗಳು |
| 11 | ಡಾಟಾ ಎಂಟ್ರಿ ಆಪರೇಟರ್ | 02 ಹುದ್ದೆಗಳು |
| 12 | ಸಹಾಯಕರು | 03 ಹುದ್ದೆಗಳು |
| 13 | ಕಿರಿಯ ಸಹಾಯಕರು | 05 ಹುದ್ದೆಗಳು |
| 14 | ಬೆರಳಚ್ಚುಗಾರರು | 01 ಹುದ್ದೆ |
| 15 | ಚಾಲಕರು | 04 ಹುದ್ದೆಗಳು |
| 16 | ದಲಾಯತ್ | 11 ಹುದ್ದೆಗಳು |
|  | ಒಟ್ಟು | 51 ಹುದ್ದೆಗಳು |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10.7.1996ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದ ಅನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2501

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ **(ಸೇವೆಗಳು–3)**

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಎಂ. ಶರಣಬಸಪ್ಪ, ಹಿಂದಿನ ತಹಶೀಲ್ದಾರ್, ಇಂಡಿ ತಾಲ್ಲೂಕು, ಬಿಜಾಪುರ ಜಿಲ್ಲೆ (ಪ್ರಸ್ತುತ ಅಮಾನತ್ತಿನಲ್ಲಿರುವ) ಇವರನ್ನು ಅಮಾನತ್ತಿನಿಂದ ಬಿಡುಗಡೆಗೊಳಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂ:ಕಂಇ 23 ಎಡಿಇ 2009, ದಿನಾಂಕ:3.10.2009

2. ಜಿಲ್ಲಾಧಿಕಾರಿಗಳು, ಬಿಜಾಪುರ ಜಿಲ್ಲೆ ಇವರ ಪತ್ರ ಸಂ:ಕವಿ:ಸಿಬ್ಬಂದಿ:1:ವಿವ:120/2009–10, ದಿನಾಂಕ:7.10.2009

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ: 3.10.2009ರ ಆದೇಶದಲ್ಲಿ ಶ್ರೀ ಎಂ. ಶರಣಬಸಪ್ಪ, ತಹಶೀಲ್ದಾರ್, ಇಂಡಿ ತಾಲ್ಲೂಕು, ಬಿಜಾಪುರ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಬಿಜಾಪುರ ಜಿಲ್ಲೆಯಲ್ಲಿ ಬರ ಪೀಡಿತ ಪ್ರದೇಶಗಳಿಗೆ ಮಾನ್ಯ ಮುಖ್ಯಮಂತ್ರಿಯವರು ಹಾಗೂ ಮಾನ್ಯ ಕಂದಾಯ ಸಚಿವರು ಭೇಟಿ ನೀಡಿದಾಗ, ಅಲ್ಲಿರುವ ಸಾರ್ವಜನಿಕರು ಸದರಿ ಅಧಿಕಾರಿಯ ವಿರುದ್ಧ ಪ್ರವಾಹದಿಂದ ಭಾದಿತರಾದ ಜನರ ರಕ್ಷಣೆ ಮಾಡಲು ಕ್ರಮ ಕೈಗೊಂಡಿಲ್ಲವೆಂದು ಮಾನ್ಯ ಮುಖ್ಯಮಂತ್ರಿಗಳಲ್ಲಿ ಮೌಖಿಕವಾಗಿ ದೂರು ನೀಡಿರುವ ಹಿನ್ನಲೆಯಲ್ಲಿ, ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರ ನಿಯಮ 10(i)(ಡಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸದರಿಯವರನ್ನು ಇಲಾಖಾ ವಿಚಾರಣೆ ಬಾಕಿಯಿರಿಸಿ, ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಿ, ಆದೇಶಿಸಲಾಗಿದೆ.

ಶ್ರೀ ಎಂ. ಶರಣಬಸಪ್ಪ, ಹಿಂದಿನ ತಹಶೀಲ್ದಾರ್ ಇಂಡಿ ತಾಲ್ಲೂಕು (ಪ್ರಸ್ತುತ ಅಮಾನತ್ತಿನಲ್ಲಿರುವ) ಇವರು ದಿನಾಂಕ:5.10.2009ರಲ್ಲಿ ಜಿಲ್ಲಾಧಿಕಾರಿಗಳು, ಬಿಜಾಪುರ ಜಿಲ್ಲೆ ಇವರಿಗೆ ಮನವಿ ಸಲ್ಲಿಸಿ, ತಾವು ಪ್ರಕೃತಿ ವಿಕೋಪ ಸಂದರ್ಭದಲ್ಲಿ ದಿನಾಂಕ:29.9.2009ರಿಂದ ಅವಿಶ್ರಾಂತವಾಗಿ ಕಾರ್ಯ ನಿರ್ವಹಿಸಿದ್ದು, ಪರಿಹಾರ ಕಾರ್ಯವನ್ನು ತ್ವರಿತವಾಗಿ ಕೈಗೊಂಡು, ಜನರ ಸಮಸ್ಯೆಗೆ ಸ್ಪಂದಿಸಿದ್ದು, ಈ ಸಮಯದಲ್ಲಿ ನೆರೆ ಪೀಡಿತ ಪ್ರದೇಶಗಳಲ್ಲಿ ಜನರ ರಕ್ಷಣೆಗೆ ಕ್ರಮ ಕೈಗೊಂಡ ಬಗ್ಗೆ ವರದಿ ಸಲ್ಲಿಸುತ್ತಾ, ಹಾಗೂ ತಮ್ಮನ್ನು ಸೇವೆಗೆ ಪುನರ್ ಸ್ಥಾಪಿಸುವಂತೆ ವಿನಂತಿಸಿರುತ್ತಾರೆಂದು, ಓದಲಾದ ಕ್ರ.ಸಂ (2)ರ ದಿನಾಂಕ:7.10.2009ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಬಿಜಾಪುರ ಜಿಲ್ಲೆ ಇವರು ಸರ್ಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ಅಲ್ಲದೇ, ಇಂಡಿ ಮತಕ್ಷೇತ್ರದ ಶಾಸಕರಾದ ಶ್ರೀ ಸಾರ್ವಭೌಮ ಬಗಲಿ ಇವರು ದಿನಾಂಕ:8.10.2009ರ ಪತ್ರದಲ್ಲಿ, ದಿನಾಂಕ:6.10.2009 ಮತ್ತು 7.10.2009ರಂದು ಅವರ ಮತ ಕ್ಷೇತ್ರಗಳಲ್ಲಿ ಸಂಚರಿಸಿದಾಗ, ಶ್ರೀ ಎಂ. ಶರಣಬಸಪ್ಪ, ತಹಶೀಲ್ದಾರ್, ಇವರು ಜನರ ರಕ್ಷಣೆ ಮಾಡಲು ಕ್ರಮಬದ್ಧವಾಗಿ, ಸಮರ್ಪಕವಾಗಿ ಕಾರ್ಯ ನಿರ್ವಹಿಸಿರುವುದು ಕಂಡುಬಂದಿರುವುದರಿಂದ ಅವರ ಅಮಾನತ್ತು ಆದೇಶವನ್ನು ಹಿಂತೆಗೆದುಕೊಂಡು, ಅವರನ್ನು ಸೇವೆಗೆ ಪುನರ್ ಸ್ಥಾಪಿಸುವಂತೆ ಕೋರಿರುತ್ತಾರೆ.

ಈ ವಿಷಯವನ್ನು ಪರಿಶೀಲಿಸಿ, ಶ್ರೀ ಎಂ. ಶರಣಬಸಪ್ಪ, ಹಿಂದಿನ ತಹಶೀಲ್ದಾರ್, ಇಂಡಿ (ಪ್ರಸ್ತುತ ಅಮಾನತ್ತು) ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಅಮಾನತ್ತಿನಿಂದ ತೆರವುಗೊಳಿಸಿ, ಸೇವೆಗೆ ಪುನರ್ ಸ್ಥಾಪಿಸಲು ಸರ್ಕಾರವು ತೀರ್ಮಾನಿಸಿದೆ, ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ:ಆರ್‌ಡಿ 23 ಎಡಿಇ 2009, ಬೆಂಗಳೂರು, ದಿನಾಂಕ:29ನೇ ಅಕ್ಟೋಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಶ್ರೀ ಎಂ .ಶರಣಬಸಪ್ಪ, ಹಿಂದಿನ ತಹಶೀಲ್ದಾರ್, ಇಂಡಿ ತಾಲ್ಲೂಕು (ಪ್ರಸ್ತುತ ಅಮಾನತ್ತಿನಲ್ಲಿರುವ) ಇವರನ್ನು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ ನಿಯಮ 10(5)(ಸಿ)ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೂಡಲೇ ಜಾರಿಗೆ ಬರುವಂತೆ ಅಮಾನತ್ತಿನಿಂದ ತೆರವುಗೊಳಿಸಿ, ಸೇವೆಗೆ ಪುನರ್ ಸ್ಥಾಪಿಸಿ ಆದೇಶಿಸಿದೆ. ಉದ್ದೇಶಿತ ಇಲಾಖಾ ವಿಚಾರಣಾ ಪ್ರಕರಣವನ್ನು ಮುಕ್ತಾಯಗೊಳಿಸಿದೆ ಹಾಗೂ ಇವರ ಅಮಾನತ್ತಿನ ಅವಧಿಯನ್ನು ಕೆ.ಸಿ.ಎಸ್.ಆರ್. ನಿಯಮಾವಳಿ ನಿಯಮ 100(1)(ಬಿ)ರನ್ವಯ ಕರ್ತವ್ಯದ ಅವಧಿಯೆಂದು ಪರಿಗಣಿಸಿ ಆದೇಶಿಸಿದೆ.

ಶ್ರೀ ಎಂ. ಶರಣಬಸಪ್ಪ, ಹಿಂದಿನ ತಹಶೀಲ್ದಾರ್, ಇಂಡಿ ತಾಲ್ಲೂಕು ಇವರನ್ನು ಸರ್ಕಾರದ ಅಧಿಸೂಚನೆ ಸಂ:ಆರ್‌ಡಿ 58 ಎಟಿಎಸ್ 2009, ದಿನಾಂಕ:26.09.2009ರಲ್ಲಿ ತಹಶೀಲ್ದಾರ್, ಸುರಪುರ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ ಇಲ್ಲಿ ಶ್ರೀ ಎಂ.ಎನ್. ಅಕ್ಬರ್ ಇವರ ಸ್ಥಳಕ್ಕೆ ವರ್ಗಾಯಿಸಿದಂತೆ, ಈ ಕೂಡಲೇ ವರ್ಗಾಯಿಸಿದ ಸ್ಥಳದಲ್ಲಿ ವರದಿ ಮಾಡಿಕೊಳ್ಳಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2503

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

**ವಿಷಯ :** ಮೈಸೂರು ಜಿಲ್ಲೆ, ಹೆಗ್ಗಡೆದೇವನಕೋಟೆ ತಾಲ್ಲೂಕು ತಹಶೀಲ್ದಾರ್ ಮತ್ತು ಸಿಬ್ಬಂದಿ ವರ್ಗದ ವಿರುದ್ಧ ಶಿಸ್ತು ಕ್ರಮ ಆರೋಪಗಳಿಂದ ಮುಕ್ತಗೊಳಿಸುವ ಕುರಿತು.

**ಓದಲಾಗಿದೆ :**

1. ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ಇವರ ಪತ್ರ ಸಂ:ಸಿಸಿಎ.ಮಿಸ್ 124. 2006–07, ದಿನಾಂಕ:10.4.2008.
2. ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ಪತ್ರ ಸಂ:ಇಎಸ್‌ಟಿ (2):ಸಿಆರ್. 38/2007–08, ದಿನಾಂಕ:8.9.2008.
3. ಸರ್ಕಾರದ ಕಾರಣ ಕೇಳುವ ನೋಟೀಸ್ ದಿನಾಂಕ:14.11.2008.
4. ಲಿಖಿತ ಹೇಳಿಕೆ:
   ಅ. ಶ್ರೀ ಟಿ. ವಿಜಯ, ಹಿಂದಿನ ತಹಶೀಲ್ದಾರ್, ಹೆಚ್.ಡಿ. ಕೋಟೆ ತಾಲ್ಲೂಕು, ದಿನಾಂಕ:15.12.2008
   ಆ. ಶ್ರೀ ಎಸ್. ಜಯಕೃಷ್ಣ, ನಿವೃತ್ತ ರಾಜಸ್ವ ನಿರೀಕ್ಷಕರು, ಬೆಂಗಳೂರು, ದಿನಾಂಕ:25.2.2009.
   ಇ. ಶ್ರೀ ಸೋಮಶೇಖರ್, ರಾಜಸ್ವ ನಿರೀಕ್ಷಕರು, ಕಂದರಿಕೆ ಹೋಬಳಿ, ಹೆಚ್.ಡಿ.ಕೋಟೆ ತಾಲ್ಲೂಕು, ಮೈಸೂರು ಜಿಲ್ಲೆ, ದಿನಾಂಕ:13.2.2009.
5. ಸರ್ಕಾರದ ಪತ್ರ ಸಂ:ಕಂಇ 51 ಎಡಿಇ 2008, ದಿನಾಂಕ:4.5.2009
6. ಅಪರ ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರ ಪತ್ರ ಸಂ:ಇಎಸ್‌ಟಿ (2):ಸಿಆರ್ 38/ 2009–10, ದಿನಾಂಕ:31.7.2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ದಿನಾಂಕ:10.4.2008ರ ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ ಇವರ ಪತ್ರದಲ್ಲಿ ಮೈಸೂರು ಜಿಲ್ಲೆ, ಹೆಗ್ಗಡೆದೇವನಕೋಟೆ ತಾಲ್ಲೂಕು ಕಛೇರಿಗೆ ದಿನಾಂಕ:30.11.2007ರಂದು ಹುಣಸೂರು ಉಪವಿಭಾಗ ಅಧಿಕಾರಿಗಳು ಅನಿರೀಕ್ಷಿತ ಭೇಟಿ ನೀಡಿ, ಕಡತಗಳ ಪರಿಶೀಲನೆ ನಡೆಸಿದ ಸಂದರ್ಭದಲ್ಲಿ ಜಮೀನು ಮಾರಾಟಕ್ಕೆ ಸಂಬಂಧಿಸಿದಂತೆ, ಹೆಚ್.ಡಿ. ಕೋಟೆ ತಹಶೀಲ್ದಾರ್ ರವರು ನಿಯಮಬಾಹಿರವಾಗಿ ನಿರಾಕ್ಷೇಪಣಾ ಪತ್ರಗಳನ್ನು ನೀಡಿರುವುದು ಅವರ ಗಮನಕ್ಕೆ ಬರಲಾಗಿ, ಸಂಬಂಧಿಸಿದ ಕಡತಗಳನ್ನು ತಹಶೀಲ್ದಾರ್ ಕಛೇರಿಯಿಂದ ಪಡೆದುಕೊಂಡು ಪರಿಶೀಲಿಸಿ ನಿಯಮಬಾಹಿರವಾಗಿ ಜಮೀನು ಮಾರಾಟಕ್ಕೆ ನಿರಾಕ್ಷೇಪಣಾ ಪತ್ರ ನೀಡಿರುವ ಪ್ರಕರಣಗಳ ವಿವರಗಳೊಂದಿಗೆ ಸಂಬಂಧಿಸಿದ ತಹಶೀಲ್ದಾರ್ ಹಾಗೂ ರಾಜಸ್ವ ನಿರೀಕ್ಷಕರ ವಿರುದ್ಧ ಶಿಸ್ತು ಕ್ರಮಕ್ಕಾಗಿ ಮೈಸೂರು ಜಿಲ್ಲಾಧಿಕಾರಿಗಳಿಗೆ ವರದಿ ಸಲ್ಲಿಸಿದ್ದರು. ಹುಣಸೂರು ಉಪವಿಭಾಗಾಧಿಕಾರಿಗಳ ಈ ವರದಿಯನ್ನು ಆಧರಿಸಿ, ಮೈಸೂರು ಜಿಲ್ಲಾಧಿಕಾರಿಗಳು ಅವರ ಪತ್ರದ ಉಲ್ಲೇಖ (2)ರ ದಿನಾಂಕ:31.12.2007ರ ಪತ್ರದ ಮೇರೆಗೆ ಈ ಕಛೇರಿಗೆ ಪ್ರಸ್ತಾವನೆ ಸಲ್ಲಿಸಿ, ಹೆಗ್ಗಡದೇವನಕೋಟೆ ತಾಲ್ಲೂಕು ಸಾಗರೆ ಗ್ರಾಮದ ಸ.ನಂ. 388/767ರ 3.00 ಎಕರೆ, ಗಂಡತ್ತೂರು ಗ್ರಾಮದ ಸ.ನಂ. 34ರ 2.00 ಎಕರೆ, ಸರಗೂರು ಗ್ರಾಮದ ಸ.ನಂ./ 41/ಪಿ–7 ರಲ್ಲಿನ 4.00 ಎಕರೆ ಜಮೀನುಗಳ ಮಾರಾಟಕ್ಕೆ ಪಿಟಿಸಿಎಲ್ ಕಾಯ್ದೆಗೆ ವಿರೋಧವಾಗಿ ತಹಶೀಲ್ದಾರ್ ರವರು ನಿರಾಕ್ಷೇಪಣಾ ಪತ್ರ ನೀಡಿರುವುದಾಗಿಯೂ, ಹೆಗ್ಗಡೆದೇವನಕೋಟೆ ತಾಲ್ಲೂಕು, ಕ್ಯಾತನಹಳ್ಳಿ ಗ್ರಾಮದ ಸ.ನಂ. 37/ಪಿ–1 ಜಮೀನಿನ ಮಾರಾಟದ ಬಗ್ಗೆ ಕರ್ನಾಟಕ ಭೂ ಕಂದಾಯ ನಿಯಮಾವಳಿಗಳ ನಿಯಮ 108ಜಿ (1)ಗೆ ವಿರುದ್ಧವಾಗಿ ಪರಭಾರೆ ಅವಧಿ ಪೂರ್ಣಗೊಳ್ಳುವ ಮೊದಲೇ ಜಮೀನು ಮಾರಾಟಕ್ಕೆ ಅವಕಾಶವಾಗುವಂತೆ ನಿರಾಕ್ಷೇಪಣಾ ಪತ್ರ ನೀಡಿದ್ದು ಈ ಎಲ್ಲಾ ನಿಯಮಬಾಹಿರ ಕ್ರಮಗಳಿಗೆ ಹೆಚ್.ಡಿ.ಕೋಟೆ ತಾಲ್ಲೂಕು ತಹಶೀಲ್ದಾರ್‌ರಾದ ಶ್ರೀಮತಿ ಟಿ. ವಿಜಯ, ಕಂದಾಯ ನಿರೀಕ್ಷಕರುಗಳಾದ ಶ್ರೀ ಸೋಮಶೇಖರ ಹಾಗೂ ಶ್ರೀ ಜಯಕೃಷ್ಣ ಇವರುಗಳು ಕಾರಣರಾಗಿದ್ದು, ಇವರುಗಳ ವಿರುದ್ಧ ಕ್ರಮ ಜರುಗಿಸಲು ಕೋರಿರುತ್ತಾರೆ.

ಈ ಮಧ್ಯೆ ಮೇಲೆ ಓದಲಾದ ಕ್ರ.ಸಂ. (2) ದಿನಾಂಕ:8.9.2008ರಲ್ಲಿ ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರು ಈ ಪ್ರಕರಣದಲ್ಲಿ ಜಂಟಿ ಇಲಾಖಾ ವಿಚಾರಣೆ ನಡೆಸಲು ಹಾಗೂ ಶ್ರೀ ಜಯಕೃಷ್ಣ, ರಾಜಸ್ವ ನಿರೀಕ್ಷಕರು, ಸರಗೂರು ಹೋಬಳಿ, ಹೆಚ್.ಡಿ. ಕೋಟೆ ತಾಲ್ಲೂಕುರವರು ಈಗಾಗಲೇ ಸೇವೆಯಿಂದ ನಿವೃತ್ತರಾಗಿರುವುದರಿಂದ ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಗಳ ನಿಯಮ 214 ರ ಮೇರೆಗೆ ಸರ್ಕಾರದ ಹಂತದಲ್ಲಿ ಶಿಸ್ತು ಕ್ರಮ ಕೈಗೊಳ್ಳಲು ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗದವರು ಶಿಫಾರಸ್ಸು ಮಾಡಿರುವ ಹಿನ್ನೆಲೆಯಲ್ಲಿ ಆರೋಪಿತ ಅಧಿಕಾರಿ/ನೌಕರರ ಕರಡು ದೋಷಾರೋಷಣಾ ಪಟ್ಟಿಯನ್ನು ತಯಾರಿಸಿ ಶಿಸ್ತು ಕ್ರಮ ಕೈಗೊಳ್ಳಲು ಜಿಲ್ಲಾಧಿಕಾರಿಗಳು, ಮೈಸೂರು ಇವರು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಕಳುಹಿಸಿರುತ್ತಾರೆ.

ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರು ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಆರೋಪಿತ ಅಧಿಕಾರಿ/ ನೌಕರರ ವಿರುದ್ಧ ಸಿಸಿಎ ನಿಯಮಾವಳಿಗಳನ್ವಯ ದೋಷಾರೋಪಣಾ ಅನುಬಂಧ–1 ರಿಂದ 4 ರ ಪಟ್ಟಿಯೊಂದಿಗೆ ಮೇಲೆ ಓದಲಾದ ಕ್ರ.ಸಂ. (3), ದಿನಾಂಕ:14.11.2008ರಲ್ಲಿ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿರುತ್ತದೆ. ಸದರಿ ನೋಟೀಸಿಗೆ ಆರೋಪಿತ ಅಧಿಕಾರಿ/ನೌಕರರು ಮೇಲೆ ಓದಲಾದ ಕ್ರ.ಸಂ. (4)ರಲ್ಲಿ ಕ್ರಮವಾಗಿ ತಮ್ಮ ಲಿಖಿತ ಸಮಜಾಯಿಷಿಗಳನ್ನು ದಾಖಲೆಗಳೊಂದಿಗೆ ಸಲ್ಲಿಸುತ್ತಾ ತಮ್ಮಗಳ ವಿರುದ್ಧ ಹೂಡಲಾಗಿರುವ ಆರೋಪಗಳಿಂದ ಮುಕ್ತಗೊಳಿಸುವಂತೆ ಕೋರಿರುತ್ತಾರೆ. ಈ ಹಿನ್ನೆಲೆಯಲ್ಲಿ ಸರ್ಕಾರವು ಈ ಪ್ರಕರಣದಲ್ಲಿ ಭಾಗಿಯಾಗಿರುವ ಶ್ರೀಮತಿ ಟಿ. ವಿಜಯ, ಹಿಂದಿನ ತಹಶೀಲ್ದಾರ್, ಹೆಚ್.ಡಿ. ಕೋಟೆ ತಾಲ್ಲೂಕು, ಶ್ರೀ ಜಯಕೃಷ್ಣ, ನಿವೃತ್ತ ರಾಜಸ್ವ ನಿರೀಕ್ಷಕರು ಹಾಗೂ ಶ್ರೀ ಸೋಮಶೇಖರ್, ಹಿಂದಿನ ರಾಜಸ್ವ ನಿರೀಕ್ಷಕರು ಇವರುಗಳು ಸಲ್ಲಿಸಿದ ಲಿಖಿತ ಸಮಜಾಯಿಷಿಗಳ ಕುರಿತು ಪರಿಶೀಲಿಸಿ, ಆಪಾದಿತರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಅಥವಾ ಕೈಬಿಡುವ ಬಗ್ಗೆ ಅಭಿಪ್ರಾಯವನ್ನು ನೀಡುವಂತೆ ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರನ್ನು ಮೇಲೆ ಓದಲಾದ ಕ್ರ.ಸಂ. (5) ದಿನಾಂಕ:4.5.2009ರ ಸರ್ಕಾರದ ಪತ್ರದಲ್ಲಿ ಕೋರಲಾಗಿತ್ತು.

ಸರ್ಕಾರದ ದಿನಾಂಕ:4.5.2009ರ ಪತ್ರಕ್ಕೆ ಉತ್ತರವಾಗಿ ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರು ಮೇಲೆ ಓದಲಾದ ಕ್ರ.ಸಂ (6) ದಿನಾಂಕ:31.7.09ರಲ್ಲಿ ಆಪಾದಿತ ಅಧಿಕಾರಿ/ನೌಕರರ ಸಮಜಾಯಿಷಿಯನ್ನು ಪರಿಶೀಲಿಸಿ ಈ ಬಗ್ಗೆ ಉಪವಿಭಾಗಾಧಿಕಾರಿ., ಹುಣಸೂರು ಇವರಿಂದ ವರದಿ ಪಡೆದು ಆರೋಪಿತ ಅಧಿಕಾರಿಯಾದ ಶ್ರೀಮತಿ ಟಿ. ವಿಜಯ, ಹಿಂದಿನ ತಹಶೀಲ್ದಾರ್, ಹೆಚ್.ಡಿ. ಕೋಟೆ ತಾಲ್ಲೂಕು ಇವರ ವಿರುದ್ಧ ಒಟ್ಟು 4 ಆರೋಪಗಳ ಕುರಿತು ಈ ಕೆಳಕಂಡಂತೆ ವರದಿ ನೀಡಿರುತ್ತಾರೆ.

ಆರೋಪ–1: ಸಾಗರೆ ಗ್ರಾಮದ ಎನ್ .ಸಿದ್ದಶೆಟ್ಟಿ ಇವರಿಗೆ ಸ.ನಂ. 388/767 ರಲ್ಲಿ 3.00 ಎಕರೆ ಜಮೀನನ್ನು ಮಾರಾಟ ಮಾಡಲು ಎನ್.ಒ.ಸಿ ಕೇಳಿದ್ದು ಅರ್ಜಿದಾರರು ಗಾಣಿಕ ಜನಾಂಗಕ್ಕೆ ಸೇರಿರುವುದರಿಂದ ರಾಜಸ್ವ ನಿರೀಕ್ಷಕರು ಶಿಫಾರಸ್ಸು ಮಾಡಿದ್ದರಿಂದ ಎನ್.ಒ.ಸಿ. ನೀಡಿರುತ್ತಾರೆ. ತಹಶೀಲ್ದಾರರವರು ಅವರ ಕೆಲಸದ ಒತ್ತಡದಲ್ಲಿ ಪ್ರತಿಯೊಂದು ಜಾತಿ/ಆದಾಯ ಪತ್ರಗಳಿಗೆ ಸಹಿ ಹಾಕುವ ಮುನ್ನ ಸ್ವತಃ ಪರಿಶೀಲನೆ ಮಾಡುವುದು ಕಷ್ಟಸಾಧ್ಯವೆಂದು ಅವರು ಗ್ರಾಮಲೆಕ್ಕಿಗರ ಮತ್ತು ರಾಜಸ್ವ ನಿರೀಕ್ಷಕರ ವರದಿಯನ್ನು ಅವಲಂಬಿಸಬೇಕಾಗಿರುವುದರಿಂದ ಆರೋಪದಿಂದ ಕೈಬಿಡಲು ಉಪವಿಭಾಗಾಧಿಕಾರಿಗಳು ವರದಿ ಮಾಡಿರುತ್ತಾರೆ.

ಆರೋಪ–2: ಗುಂಡತ್ತೂರು ಗ್ರಾಮದ ದಾಸೇಗೌಡ ಇವರಿಗೆ ಮಂಜೂರಾಗಿರುವ ಗುಂಡತ್ತೂರು ಗ್ರಾಮದ ರಿ.ಸ.ನಂ. 34 ರಲ್ಲಿ 2.00 ಎಕರೆ ಜಮೀನನ್ನು ಮಾರಾಟ ಮಾಡಲು ದಿನಾಂಕ:21.10.2006ರಂದು ಅನುಮತಿ ನೀಡಿರುವ ವಿಚಾರದಲ್ಲಿ ಸದರಿ ಜಮೀನು ಪಿ.ಟಿ.ಸಿ.ಎಲ್. ಕಾಯ್ದೆಗೆ ಒಳಪಡುವುದಿಲ್ಲವಾದ್ದರಿಂದ ಈ ಆರೋಪದಿಂದ ಶ್ರೀಮತಿ ಟಿ. ವಿಜಯರವರನ್ನು ಕೈಬಿಡಬಹುದಾಗಿದೆ ಎಂದು ಅಭಿಪ್ರಾಯ ಪಟ್ಟಿರುತ್ತಾರೆ.

ಆರೋಪ–3: ಶ್ರೀ ಜಯಕೃಷ್ಣ ರವರು ದಿನಾಂಕ:4.7.2007ರಂದು ಸಲ್ಲಿಸಿರುವ ವರದಿಯಲ್ಲಿ ನಾಯಕ ಅಥವಾ ಸಾಮಾನ್ಯ ಎಂದು ನಮೂದಿಸಿದ ಬಗ್ಗೆ ಸ್ಪಷ್ಟವಾಗಿ ಕಂಡು ಬರುತ್ತಿಲ್ಲವೆಂದು ಹಾಗೂ ಹಾಲಿ ನೌಕರರು ದಿನಾಂಕ:31.3.2008ರಂದು ವಯೋ ನಿವೃತ್ತಿ ಹೊಂದಿರುವುದರಿಂದ ಇದರಿಂದ ಯಾವುದೇ ಹಣ ದುರುಪಯೋಗವಾಗಿ ಲ್ಲವಾದ್ದರಿಂದ ಸದರಿಯವರನ್ನು ಆರೋಪದಿಂದ ಕೈಬಿಡಬಹುದಾಗಿದೆ ಎಂದು ಅಭಿಪ್ರಾಯ ಪಟ್ಟಿರುತ್ತಾರೆ.

ಎನ್.ಓ.ಸಿ. ಕಡತದಲ್ಲಿ ಅಂಕನಾಯ್ಕ ಅವರಿಗೆ ಮುಖ್ಯೋಪಾಧ್ಯಾಯರವರು ಸ.ಹಿ.ಪ್ರಾ.ಶಾಲೆ. ಚಕ್ಕೂರವರು ಜಾತಿ ಪ್ರಮಾಣ ಪತ್ರ ಎಂದು ನಮೂದಿಸಿ ನೀಡಿರುವ ಪ್ರಮಾಣ ಪತ್ರದಲ್ಲಿ ಅಂಕನಾಯ್ಕರವರು ಜಾತಿ ಪರಿವಾರವೆಂದು ನಮೂದಾಗಿದೆ. ಆದರೆ ತಹಶೀಲ್ದಾರ್‌ರವರು ಶಾಲಾ ದಾಖಲಾತಿ ಮೇಲೆ ಎನ್.ಒ.ಸಿ ನೀಡುವ ಮುನ್ನ ದಿನಾಂಕ:28.6.2007ರಂದು ನೀಡಿರುವ ಎಸ್.ಟಿ. ಪ್ರಮಾಣ ಪತ್ರವನ್ನು ವಜಾಗೊಳಿಸಲು ಕ್ರಮ ವಹಿಸಬೇಕಾಗಿತ್ತು. ಆದರೆ ಶಾಲಾ ದಾಖಲಾತಿ ಪ್ರಕಾರ ಅರ್ಜಿದಾರರಿಗೆ ಪರಿವಾರ ಪ. ವರ್ಗಕ್ಕೆ ಒಳಪಡುವುದರಿಂದ ಈ ಪ್ರಕರಣದಲ್ಲಿ ಎನ್.ಒ.ಸಿ. ನೀಡಿರುವುದು ಪಿ.ಟಿ.ಸಿ.ಎಲ್. ಕಾಯ್ದೆಗೆ ಒಳಪಡುವುದಿಲ್ಲವೆಂದು ಅಭಿಪ್ರಾಯ ನೀಡಿರುತ್ತಾರೆ.

ಆರೋಪ–4: ಅಂದಿನ ತಹಶೀಲ್ದಾರ್ ಶ್ರೀಮತಿ ವಿಜಯರವರು ಭೂ ಕಂದಾಯ ನಿಯಮ 108(ಜಿ)(1) ಅನ್ನು ಉಲ್ಲಂಘಿಸಿ ಪರಭಾರೆ ಷರತ್ತಿನ ಅವಧಿ ಮೀರಿದ ಜಮೀನಿಗೆ ಎನ್.ಒ.ಸಿ ನೀಡಿರುತ್ತಾರೆ.

ಸರ್ಕಾರದ ಸುತ್ತೋಲೆ ದಿನಾಂಕ:2.8.1999ರಲ್ಲಿ ಭೂ ಮಂಜೂರಾತಿ ನಿಯಮಗಳಡಿ ಹಾಗೂ ಭೂ ಸುಧಾರಣೆ ಕಾಯಿದೆ 1961 ರಡಿ ಕೃಷಿ ಜಮೀನುಗಳನ್ನು ವರ್ಗಾವಣೆ ಮಾಡುವ ಸಮಯದಲ್ಲಿ ತಹಶೀಲ್ದಾರರು ಭೂ ಮಂಜೂರಾತಿ, ಭೂ ಸುಧಾರಣೆ ಹಾಗೂ ಪಿಟಿಸಿಎಲ್ ಕಾಯದೆಯಡಿ ವಿಧಿಸಲಾದ ಷರತ್ತುಗಳನ್ನು ಪರಿಶೀಲಿಸಿ, ನಿರಾಕ್ಷೇಪಣಾ ಪ್ರಮಾಣ ಪತ್ರವನ್ನು ನೀಡುವಲ್ಲಿ ನಿರ್ಧರಿಸಬೇಕಾಗುತ್ತದೆ.

ಆದಾಗ್ಯೂ ತಹಶೀಲ್ದಾರ್ ರವರು ಎನ್.ಓ.ಸಿ. ನೀಡುವ ಮುನ್ನ ಸಾಗುವಳಿ ಚೀಟಿ ಪರಿಶೀಲಿಸಬೇಕಾಗಿದ್ದು, ಸದರಿ ಕ್ರಮವು ಶಾಲಾ ಕಟ್ಟಡ ನಿರ್ಮಾಣಕ್ಕಾಗಿ ಎಂಬ ಸದುದ್ದೇಶದಿಂದ ಮಾಡಿದ್ದು ಯಾವುದೇ ಆರ್ಥಿಕ ನಷ್ಟ ಆಗಿರುವುದಿಲ್ಲವೆಂದು ಅಭಿಪ್ರಾಯ ಪಟ್ಟಿರುತ್ತಾರೆ.

ಉಪವಿಭಾಗಾಧಿಕಾರಿಗಳು, ಹುಣಸೂರು ಇವರು ಆರೋಪಗಳಿಗೆ ಸಂಬಂಧಿಸಿದಂತೆ ದಾಖಲೆಗಳನ್ನು ಪರಿಶೀಲಿಸಿ, ನೀಡಿರುವ ವರದಿಯು ವಾಸ್ತವಾಂಶದಿಂದ ಕೂಡಿರುವ ಕಾರಣ ಹಾಗೂ ಈ ಪ್ರಕರಣದಲ್ಲಿ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟವಾಗಲೀ ಅಥವಾ ಸರ್ಕಾರಿ ಹಣ ದುರುಪಯೋಗವಾಗಲೀ ಆಗಿರುವುದಿಲ್ಲವಾದ್ದರಿಂದ ಪ್ರಸ್ತಾವನೆಯನ್ನು ಕೈಬಿಡಲು ಅಪರ ಜಿಲ್ಲಾಧಿಕಾರಿಗಳು, ಮೈಸೂರು ಇವರು ಶಿಫಾರಸ್ಸು ಮಾಡಿರುವುದನ್ನು ಸರ್ಕಾರವು ಒಪ್ಪಿ ಈ ಪ್ರಕರಣದಲ್ಲಿ ಭಾಗಿಯಾಗಿರುವ ಅಧಿಕಾರಿ/ನೌಕರರ ವಿರುದ್ಧ ಆರೋಪಗಳಿಂದ ಮುಕ್ತರನ್ನಾಗಿಸಲು ತೀರ್ಮಾನಿಸಿರುವುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂ:ಆರ್‌ಡಿ 51 ಎಡಿಇ 2008, ಬೆಂಗಳೂರು, ದಿನಾಂಕ:30ನೇ ಅಕ್ಟೋಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಪ್ರಕರಣದ ಕುರಿತು ಅಪರ ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಇವರು ಸಲ್ಲಿಸಿರುವ ದಿನಾಂಕ: 31.7.2009ರ ವರದಿಯನ್ನು ಒಪ್ಪಿ ಈ ಕೆಳಕಂಡ ಅಧಿಕಾರಿ/ನೌಕರರ ವಿರುದ್ಧ ಹೂಡಲಾಗಿದ್ದ ಆರೋಪಗಳಿಂದ ಈ ಪ್ರಕರಣದ ಮಟ್ಟಿಗೆ ಕೈಬಿಟ್ಟು ಆದೇಶಿಸಿದೆ.

**1.** ಶ್ರೀಮತಿ ಟಿ. ವಿಜಯ, – ಹಿಂದಿನ ತಹಶೀಲ್ದಾರ್, ಹೆಚ್.ಡಿ. ಕೋಟೆ ತಾಲ್ಲೂಕು, ಪ್ರಸ್ತುತ ವಿಶೇಷ ತಹಶೀಲ್ದಾರ್, ಖಾದಿ ಬೋರ್ಡ್, ಮೈಸೂರು

**2** ಶ್ರೀ ಜಯಕೃಷ್ಣ,– ಹಿಂದಿನ ರಾಜಸ್ವ ನಿರೀಕ್ಷಕರು, ಸರಗೂರು ಹೋಬಳಿ, ಹೆಚ್.ಡಿ.ಕೋಟೆ ತಾಲ್ಲೂಕು (ಪ್ರಸ್ತುತ ನಿವೃತ್ತ)

**3.** ಶ್ರೀ ಸೋಮಶೇಖರ್– ಹಿಂದಿನ ರಾಜಸ್ವ ನಿರೀಕ್ಷಕರು, ಕಂದಲಿಕ ಹೋಬಳಿ, ಹೆಚ್.ಡಿ.ಕೋಟೆ ತಾಲ್ಲೂಕು,

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2504

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

**ಒಳಾಡಳಿತ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ:ಒಇ 405 ಪಿಪಿಇ 2009, ಬೆಂಗಳೂರು, ದಿನಾಂಕ:4ನೇ ನವೆಂಬರ್, 2009**

ಸರ್ಕಾರದ ಆದೇಶ ಸಂಖ್ಯೆ:ಒಇ 405 ಪಿಪಿಇ 2009, ದಿನಾಂಕ:3.11.2009ರ ಆದೇಶ ಭಾಗದ 1ನೇ ಕಂಡಿಕೆ ನಂತರ 2ನೇ ಕಂಡಿಕೆಯಾಗಿ ಈ ಕೆಳಕಂಡಂತೆ ಸೇರ್ಪಡೆ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

"ಸದರಿ ಮೊತ್ತ ರೂ., 25,49,000/ಗಳನ್ನು ಸಂಕ್ಷಿಪ್ತ ಸಾದಿಲ್ವಾರು ಬಿಲ್ಲಿನ (ಎ.ಸಿ. ಬಿಲ್ಲು) ಮುಖಾಂತರ ಡ್ರಾ ಮಾಡಲು ಅನುಮತಿ ನೀಡಲಾಗಿದೆ"

ಉಳಿದಂತೆ ಸರ್ಕಾರದ ಆದೇಶ ಸಂಖ್ಯೆ:ಒಇ 405 ಪಿಪಿಇ 2009, ದಿನಾಂಕ:3.11.2009ರಲ್ಲಿ ಯಾವುದೇ ಬದಲಾವಣೆಗಳು ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2525

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)